| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| 13. | 5 ಹೆಚ್‌ಪಿ ಎಲೆಕ್ಟ್ರಿಕ್ ಪಂಪ್ ವಿತ್ ಮೋಟಾರ್ ಸ್ಟಾರ್ಟರ್ ಮತ್ತು ಸ್ವಿಚ್ ಬೆಡ್ ಪ್ಲೇಟ್ ನಂ.833615 | 1 ಸಂಖ್ಯೆ | ಲಾಟ್ 5 | -"- | -"- | -"- | -"- | -"- | -"- |
| 14. | ಡಿಕೋಲೇತ್ 6" | 1 ಸಂಖ್ಯೆ | ಲಾಟ್ 5 | -"- | | | | | |
| 15. | ಡೀಸಲ್ ವೆಲ್ಡಿಂಗ್ ಪ್ಲಾಂಟ್ ನಂ.9311-12 162 | 1 ಸಂಖ್ಯೆ | ಲಾಟ್ 5 | -"- | -"- | -"- | -"- | -"- | ನಂ.1 ಕಾ. ಮತ್ತು ಯಾಂ. ಉಪವಿಭಾಗ ಗೊರೂರು, ಸ್ಟೋರ್ ಯಾರ್ಡ್ ಗೊರೂರು (ಸರ್ಕ್ಯೂಟ್ ಹೌಸ್ ಹತ್ತಿರ) ಹಾಸನ ಜಿಲ್ಲೆ (ಕ್ರ.ಸಂ.14 ರಿಂದ 17) |
| 16. | ವೆಲ್ಕಾನ್ ಪವರ್ ಹ್ಯಾಮರ್ ನಂ.54193 | 1 ಸಂಖ್ಯೆ | ಲಾಟ್ 5 | -"- | -"- | -"- | -"- | -"- | |
| 17. | ವಿಆರ್ 5 ವೊಲ್ಫ್ ಪ್ರಿಸಿಶನ್ ಗ್ರೈಂಡಿಂಗ್ ಮಿಶಿನ್ ನಂ. ಎ.250007 | 1 ಸಂಖ್ಯೆ | ಲಾಟ್ 5 | -"- | -"- | -"- | -"- | -"- | -"- |

ಟೋಕನ್ ಡಿಪಾಸಿಟ್‌ನ್ನು ಡಿಡಿ ರೂಪದಲ್ಲಿಯೇ ಕಾರ್ಯಪಾಲಕ ಇಂಜಿನಿಯರ್, ಕಾರ್ಯಾಗಾರ ಮತ್ತು ಯಾಂತ್ರಿಕ ವಿಭಾಗ, ಗೊರೂರು ಇವರ ಹೆಸರಿನಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಅರಕಲಗೂಡು ಶಾಖೆ, ಹಾಸನ ಜಿಲ್ಲೆ ಇಲ್ಲಿ ಪಾವತಿಯಾಗುವಂತೆ ಪಾವತಿಸತಕ್ಕದ್ದು.

ಟೆಂಡರ್ ಫಾರಂಗಳು ನಿಗದಿತ ನಮೂನೆಯಲ್ಲಿದ್ದು 6ನೇ ಕಾಲಂನಲ್ಲಿ ತೋರಿಸಿರುವಂತೆ ಹಣವನ್ನು ರೂ.1000-00 (ವ್ಯಾಟ್ ತೆರಿಗೆ ಸೇರಿ) ನಗದು ರೂಪದಲ್ಲಿ ಈ ಕಛೇರಿಯಲ್ಲಿ ಪಾವತಿಸಿ ಪಡೆಯಬಹುದು. ಒಂದು ವೇಳೆ ಖಾಲಿ ಫಾರಂಗಳನ್ನು ಅಂಚೆ ಮುಖಾಂತರ ಪಡೆಯಲು ಕೋರಿಕೆ ಸಲ್ಲಿಸಿದರೆ ಅಂಚೆ ವೆಚ್ಚ ಸೇರಿ ರೂ. 100-00 ಗಳನ್ನು ಪ್ರತಿ ಸೆಟ್ಟಿಗೆ ಹೆಚ್ಚುವರಿಯಾಗಿ ಡಿಡಿ ರೂಪದಲ್ಲಿ ಕಾರ್ಯಪಾಲಕ ಇಂಜಿನಿಯರ್, ಕಾರ್ಯಾಗಾರ ಮತ್ತು ಯಾಂತ್ರಿಕ ವಿಭಾಗ, ಗೊರೂರು ಇವರ ಹೆಸರಿನಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಅರಕಲಗೂಡು ಶಾಖೆ, ಹಾಸನ ಜಿಲ್ಲೆ ಇಲ್ಲಿ ಪಾವತಿಯಾಗುವಂತೆ ಸಲ್ಲಿಸತಕ್ಕದ್ದು.

ಟೆಂಡರ್ ಫಾರಂನಲ್ಲಿ ಟೆಂಡರ್ ಮೊತ್ತವನ್ನು ಲಾಟ್‌ವೈಸ್ ಪ್ರತ್ಯೇಕವಾಗಿ ನಮೂದಿಸತಕ್ಕದ್ದು. ದಿನಾಂಕ: 30.05.2006ರಂದು 11.00 ಗಂಟೆಗೆ ಪ್ರಾರಂಭವಾಗುವ ಬಹಿರಂಗ ಹರಾಜು ಮುಗಿದ ತಕ್ಷಣ ಅಂದೇ ಎಂದರೆ ದಿನಾಂಕ: 30.05.2006ರಂದು ಟೆಂಡರನ್ನು ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ ನಂ.2 ಕಾರ್ಯಾಗಾರ ಮತ್ತು ಯಾಂತ್ರಿಕ ಉಪವಿಭಾಗ, ಡಾ: ರಾಜ್‌ಕುಮಾರ್ ರಸ್ತೆ, ರಾಜಾಜಿನಗರ, ಬೆಂಗಳೂರು ಇಲ್ಲಿ ತೆರೆಯಲಾಗುವುದು. ಟೆಂಡರ್ ಅಲ್ಲದೆ ಬಹಿರಂಗ ಹರಾಜನ್ನು ದಿನಾಂಕ:30.05.2006ರಂದು ಬೆಳಿಗ್ಗೆ 11.00 ಗಂಟೆಗೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ರವರ ಕಛೇರಿ ನಂ.2 ಕಾರ್ಯಾಗಾರ ಮತ್ತು ಯಾಂತ್ರಿಕ ಉಪವಿಭಾಗ, ಡಾ: ರಾಜ್‌ಕುಮಾರ್ ರಸ್ತೆ, ರಾಜಾಜಿನಗರ, ಬೆಂಗಳೂರು, ಈ ಕಛೇರಿಯ ಆವರಣದಲ್ಲಿ ಮಾಡಲಾಗುವುದು. ಬಹಿರಂಗ ಹರಾಜನ್ನು ಲಾಟ್‌ವೈಸ್ ಪ್ರತ್ಯೇಕವಾಗಿ ಮಾಡಲಾಗುವುದು. ಟೆಂಡರಿನಲ್ಲಿ ಭಾಗವಹಿಸಿದವರೂ ಸಹ ಬಹಿರಂಗ ಹರಾಜಿನಲ್ಲಿಯೂ ಭಾಗವಹಿಸಬಹುದು. ಆದರೆ ಇದಕ್ಕಾಗಿ ಟೋಕನ್ ಡಿಪಾಸಿಟ್‌ನ್ನು (ಕಾಲಂ ನಂ.5ರಂತೆ) ಪ್ರತ್ಯೇಕವಾಗಿ ಕೊಡತಕ್ಕದ್ದು. ಟೆಂಡರಿಗಾಗಿ ಕೊಡಲಾದ ಟೋಕನ್ ಡಿಪಾಸಿಟ್‌ನ್ನು ಬಹಿರಂಗ ಹರಾಜಿಗಾಗಿ ಹೊಂದಾಣಿಕೆ ಮಾಡಿಕೊಳ್ಳಲಾಗುವುದಿಲ್ಲ. ಟೋಕನ್ ಡಿಪಾಸಿಟ್‌ನ್ನು ಕಾರ್ಯಪಾಲಕ ಇಂಜಿನಿಯರ್, ಕಾರ್ಯಾಗಾರ ಮತ್ತು ಯಾಂತ್ರಿಕ ವಿಭಾಗ, ಗೊರೂರು ಇವರ ಹೆಸರಿನಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಅರಕಲಗೂಡು ಶಾಖೆ, ಹಾಸನ ಜಿಲ್ಲೆ ಇಲ್ಲಿ ಪಾವತಿಯಾಗುವಂತೆ ಸಲ್ಲಿಸತಕ್ಕದ್ದು.

ಯಶಸ್ವಿ ಬಿಡ್‌ದಾರರು ಸ್ಥಳದಲ್ಲಿಯೆ ಬಿಡ್ ಮೊತ್ತದ 25% ಹಣವನ್ನು (ಟೋಕನ್ ಡಿಪಾಸಿಟ್ ಬಿಟ್ಟು) ನಗದು ರೂಪದಲ್ಲಿ ಅಥವಾ ಡಿಡಿ ಮೂಲಕ ಕಾರ್ಯಪಾಲಕ ಇಂಜಿನಿಯರ್, ಕಾರ್ಯಾಗಾರ ಮತ್ತು ಯಾಂತ್ರಿಕ ವಿಭಾಗ, ಗೊರೂರು ಇವರ ಹೆಸರಿನಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಅರಕಲಗೂಡು ಶಾಖೆ, ಹಾಸನ ಜಿಲ್ಲೆ ಇಲ್ಲಿ ಪಾವತಿಯಾಗುವಂತೆ ಕೊಡತಕ್ಕದ್ದು. ಇಲ್ಲದಿದ್ದರೆ ಟೋಕನ್ ಡಿಪಾಸಿಟ್‌ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಯಶಸ್ವಿ ಟೆಂಡರ್‌ದಾರರು ಸಹಿತ ಟೆಂಡರ್ ಮೊತ್ತದ 25% ಹಣವನ್ನು ಬಹಿರಂಗ ಹರಾಜಿನ ದಿವಸವೇ ನಗದು ರೂಪದಲ್ಲಿ ಅಥವಾ ಡಿಡಿ ಮೂಲಕ ಕಾರ್ಯಪಾಲಕ ಇಂಜಿನಿಯರ್, ಕಾರ್ಯಾಗಾರ ಮತ್ತು ಯಾಂತ್ರಿಕ ವಿಭಾಗ, ಗೊರೂರು ಇವರ ಹೆಸರಿನಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಅರಕಲಗೂಡು ಶಾಖೆ, ಹಾಸನ ಜಿಲ್ಲೆ ಇಲ್ಲಿ ಪಾವತಿಯಾಗುವಂತೆ ಕೊಡತಕ್ಕದ್ದು. ಇದರ ಸಲುವಾಗಿ ಎಲ್ಲಾ ಟೆಂಡರ್‌ದಾರರು ಟೆಂಡರ್ ತೆರೆಯುವ ಸಂದರ್ಭದಲ್ಲಿ (ಬಹಿರಂಗ ಹರಾಜು ಮುಗಿದ ತಕ್ಷಣ) ಸಹಾಯಕ ಕಾರ್ಯಪಾಲಕ ಇಂಜಿನಿಯರ್ ರವರ ಕಛೇರಿ ನಂ.2 ಕಾರ್ಯಾಗಾರ ಮತ್ತು ಯಾಂತ್ರಿಕ ಉಪವಿಭಾಗ, ಡಾ: ರಾಜ್‌ಕುಮಾರ್ ರಸ್ತೆ, ರಾಜಾಜಿನಗರ, ಬೆಂಗಳೂರು ಇಲ್ಲಿ ದಿನಾಂಕ: 30.05.2006ರಂದು ಕಡ್ಡಾಯವಾಗಿ ಹಾಜರಿರತಕ್ಕದ್ದು.

ಯಶಸ್ವಿ ಟೆಂಡರ್‌ದಾರರು/ ಬಿಡ್‌ದಾರರು/ ಟೆಂಡರ್/ ಬಿಡ್ ಮೊತ್ತದ 25% ಹಣವನ್ನು ಸ್ಥಳದಲ್ಲಿಯೇ (ದಿನಾಂಕ: 30.05.2006ರಂದು) ಪಾವತಿಸದಿದ್ದರೆ ಅವರ ಟೋಕನ್ ಡಿಪಾಸಿಟ್‌ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಈ ಕೆಳಗೆ ನಮೂದಿಸಿದಂತೆ ತೆರಿಗೆಯನ್ನು ವಿಧಿಸಲಾಗುವುದು.

ಮೌಲ್ಯವರ್ಧಿತ ತೆರಿಗೆ (ವ್ಯಾಟ್) 12.5%

ಆದಾಯ ತೆರಿಗೆ 1% (ಟೆಂಡರ್/ ಬಿಡ್ ಮೊತ್ತ ಮತ್ತು ವ್ಯಾಟ್ ಸೇರಿದ ಮೊತ್ತಕ್ಕೆ)

ಸರ್‌ಚಾರ್ಜ್ 10%

ಎಜುಕೇಷನ್ ಸೆಸ್ 2% (ಆದಾಯ ತೆರಿಗೆ + ಸರ್ ಚಾರ್ಜ್ ಮೇಲೆ)

ಟೆಂಡರ್/ ಬಹಿರಂಗ ಹರಾಜಿನ ಕುರಿತ ಹೆಚ್ಚಿನ ವಿವರಗಳಿಗೆ ಈ ಕಛೇರಿಯನ್ನು ಸಂಪರ್ಕಿಸಬಹುದಾಗಿದೆ.

ಯಂತ್ರೋಪಕರಣಗಳನ್ನು ಅವುಗಳನ್ನು ಇಡಲಾದ ಸ್ಥಳದಲ್ಲಿ (ಕಾಲಂ 10ರಲ್ಲಿ ತೋರಿಸಿರುವಂತೆ) ಕಛೇರಿ ವೇಳೆಯಲ್ಲಿ ಇಚ್ಛೆಯುಳ್ಳವರು ಸಂಬಂಧಿಸಿದ ಅಧಿಕಾರಿಗಳ ಪರವಾನಗಿ ಪಡೆದು ಪರಿವೀಕ್ಷಣೆ ಮಾಡಬಹುದು.

ಟೆಂಡರ್ ಮತ್ತು ಬಹಿರಂಗ ಹರಾಜಿನ ಪ್ರಕ್ರಿಯೆಯಲ್ಲಿ ಯಾವುದೇ ವಿವಾದ ತಲೆತೋರಿದರೆ, ಮುಖ್ಯ ಇಂಜಿನಿಯರ್ ಹೈಡ್ರಾಲಜಿ ಮತ್ತು ಕೇಂದ್ರ ಯಾಂತ್ರಿಕ ಸಂಸ್ಥೆ, ಆನಂದರ್‌ರಾವ್ ವೃತ್ತ, ಬೆಂಗಳೂರು ಇವರ ನಿರ್ಣಯವೇ ಅಂತಿಮವಾಗಿರುತ್ತದೆ.

ಕಾರ್ಯಪಾಲಕ ಇಂಜಿನಿಯರ್,

ಪಿ.ಆರ್.134 ಕಾರ್ಯಾಗಾರ ಹಾಗೂ ಯಾಂತ್ರಿಕ ವಿಭಾಗ, ಗೊರೂರು.

## ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, (ರಾಜ್ಯವಲಯ), ತುಮಕೂರು

## ವಿವಿಧ ಫಸಲುಗಳ ಟೆಂಡರ್ ಹರಾಜು ಪ್ರಕಟಣೆ

### ಸಂಖ್ಯೆ:ಹಿಸತೋನಿ: ರಾವ:ತು:ತಾಸ: 838:05-06, ದಿನಾಂಕ:17ನೇ ಫೆಬ್ರವರಿ, 2006

2006ನೇ ಸಾಲಿನ ಮೊದಲನೇ ಅವಧಿಯ ಅಂದರೆ ದಿನಾಂಕ: 01.01.2006ರಿಂದ 30.06.2006ರವರೆಗಿನ ತುಮಕೂರು ಜಿಲ್ಲೆಯ ರಾಜ್ಯ ವಲಯ ವ್ಯಾಪ್ತಿಯಲ್ಲಿ ಬರುವ ಈ ಕೆಳಕಂಡ ತೋಟಗಾರಿಕೆ ಕ್ಷೇತ್ರ ನರ್ಸರಿಗಳಲ್ಲಿ ಬೆಳೆದಿರುವ ಫಸಲನ್ನು ಹರಾಜು ಅನುಮೋದಿಸಿದ ದಿನಾಂಕದಿಂದ ರೂಢಿಸಿಕೊಳ್ಳಲು ಟೆಂಡರ್ : ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಆಸಕ್ತಿಯುಳ್ಳ ಸಾರ್ವಜನಿಕರು ಮತ್ತು ಹಣ್ಣಿನ ವ್ಯಾಪಾರಿಗಳು ಸರಿಯಾದ ಸಮಯಕ್ಕೆ ಹಾಜರಿದ್ದು ಪ್ರಕ್ರಿಯೆಯಲ್ಲಿ ಭಾಗವಹಿಸಲು ಕೋರಲಾಗಿದೆ. ಹೆಚ್ಚಿನ ವಿವರಗಳು ಮತ್ತು ಟೆಂಡರ್ ಫಾರಂಗಳನ್ನು ಈ ಕಛೇರಿಯಲ್ಲಿ ಕಛೇರಿಯ ವೇಳೆಯಲ್ಲಿ ರೂ.25-00 ಗಳನ್ನು ಪಾವತಿಸಿ ನಿಗದಿತ ಫಾರಂಗಳನ್ನು ಪಡೆಯಬಹುದಾಗಿದೆ. ಪ್ರತಿಯೊಂದು ಕ್ಷೇತ್ರ ಮತ್ತು ಫಸಲಿಗೆ ಪ್ರತ್ಯೇಕವಾಗಿ ಟೆಂಡರ್ ಫಾರಂ ಖರೀದಿಸತಕ್ಕದ್ದು.

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರದ ನರ್ಸರಿಗಳ ಹೆಸರು | ಫಸಲು | ಠೇವಣಿ ಮೊತ್ತ | ಟೆಂಡರ್ ಸ್ವೀಕರಿಸುವ ಕೊನೆಯ ದಿನಾಂಕ ವೇಳೆ (ಸಂಜೆ 5.00) | ಟೆಂಡರ್ ನಡೆಸುವ ದಿನಾಂಕ: (ಬೆಳಿಗ್ಗೆ) |
|---|---|---|---|---|---|
| 1. | ಮಂಗಳ ತೋ. ಕ್ಷೇತ್ರ. | ಮಾವು | 2000 | 31.03.2006 | 01-04 |
| 2. | ರಂಗಸ್ವಾಮಿಗುಡ್ಡ, ತೋ.ಕ್ಷೇತ್ರ. | ಮಾವು | 2000 | 01.04.2006 | 03-04 |
| | | ಗೋಡಂಬಿ | 2000 | 01.04.2006 | 03-04 |
| | | ಹಲಸು | 500 | 01.04.2006 | 03-04 |
| 3. | ಮಾರ್ಕೋನಹಳ್ಳಿ ತೋ. ಕ್ಷೇತ್ರ. | ಮಾವು | 2000 | 03.04.2006 | 04-04 |
| | | ಗೋಡಂಬಿ | 2000 | 03.04.2006 | 04-04 |
| | | ಹಲಸು | 2000 | 03.04.2006 | 04-04 |
| 4. | ಬಿಳಿದೇವಾಲಯ, ತೋ. ಕ್ಷೇತ್ರ. | ಮಾವು | 2000 | 04.04.2006 | 05-04 |
| | | ತೆಂಗು | 2000 | 04.04.2006 | 05-04 |
| | | ಹಲಸು | 500 | 04.04.2006 | 05-04 |
| 5. | ಜೆ.ಸಿ. ಪುರ ತೋ. ಕ್ಷೇತ್ರ. | ಮಾವು | 2000 | 05.04.2006 | 06-04 |
| | | ಗೋಡಂಬಿ | 2000 | 05.04.2006 | 06-04 |
| | | ಹಲಸು | 500 | 05.04.2006 | 06-04 |
| | | ತೆಂಗು | 2000 | 05.04.2006 | 06-04 |
| 6. | ಇಂದಿರಾ ತೋ. ಕ್ಷೇತ್ರ | ಮಾವು | 2000 | 06.04.2006 | 10-04 |
| | | ತೆಂಗು | 2000 | 06.04.2006 | 10-04 |
| 7. | ಹೇರೂರು ತೋ. ಕ್ಷೇತ್ರ | ಮಾವು | 2000 | 10.04.2006 | 12-04 |
| | | ತೆಂಗು | 2000 | 10.04.2006 | 12-04 |
| 8. | ನಿಡುವಳಲು ತೋ. ಕ್ಷೇತ್ರ | ಮಾವು | 2000 | 12.04.2006 | 13-04 |
| | | ಗೋಡಂಬಿ | 2000 | 12.04.2006 | 13-04 |
| | | ತೆಂಗು | 2000 | 12.04.2006 | 13-04 |
| 9. | ಮಾದಿಹಳ್ಳಿ ತೋ. ಕ್ಷೇತ್ರ. | ಮಾವು | 2000 | 13.04.2006 | 17-04 |
| | | ಗೋಡಂಬಿ | 2000 | 13.04.2006 | 17-04 |
| | | ಹಲಸು | 2000 | 13.04.2006 | 17-04 |

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರದ ನರ್ಸರಿಗಳ ಹೆಸರು | ಫಸಲು | ಠೇವಣಿ ಮೊತ್ತ | ಟೆಂಡರ್ ಸ್ವೀಕರಿಸುವ ಕೊನೆಯ ದಿನಾಂಕ ವೇಳೆ (ಸಂಜೆ 5.00) | ಟೆಂಡರ್ ನಡೆಸುವ ದಿನಾಂಕ: (ಬೆಳಿಗ್ಗೆ) |
|---|---|---|---|---|---|
| 10. | ರಾಜವಂತಿ ತೋ. ಕ್ಷೇತ್ರ | ಮಾವು | 2000 | 17.04.2006 | 18-04 |
| | | ತೆಂಗು | 2000 | 17.04.2006 | 18-04 |
| | | ಹಲಸು | 500 | 17.04.2006 | 18-04 |
| 11. | ಜಿಲ್ಲಾ ನರ್ಸರಿ | ತೆಂಗು | 2000 | 18.04.2006 | 19-04 |
| 12. | ಕುಣಿಗಲ್ ನರ್ಸರಿ | ತೆಂಗು | 2000 | 18.04.2006 | 19-04 |

**ವಿಶೇಷ ಸೂಚನೆ:** ಠೇವಣಿ ಮೊತ್ತವನ್ನು ಕ್ರಾಸ್ಡ್ ಮಾಡಿದ ಡಿ.ಡಿ. ರೂಪದಲ್ಲಿ ಮಾತ್ರ ಸ್ವೀಕರಿಸಲಾಗುವುದು.

ಟೆಂಡರ್‌ದಾರರು ಭರ್ತಿ ಮಾಡಿದ ಟೆಂಡರ್ ಫಾರಂ ಜೊತೆಯಲ್ಲಿ ತಾವು ನಮೂದಿಸಿರುವ ಟೆಂಡರ್ ಮೊತ್ತ ಶೇಕಡ 50 ಭಾಗದ ಮೊತ್ತವನ್ನು ಮತ್ತು ನಿಗದಿಪಡಿಸಿದ ಠೇವಣಿ ಮೊತ್ತವನ್ನು ಕ್ರಾಸ್ಡ್ ಡಿ.ಡಿ. ರೂಪದಲ್ಲಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯ ವಲಯ) ತುಮಕೂರು ರವರ ಹೆಸರಿನಲ್ಲಿ ಪಡೆದು ಕಡ್ಡಾಯವಾಗಿ ಲಗತ್ತಿಸಿರಬೇಕು. ಟೆಂಡರ್‌ಫಾರಂ ನಲ್ಲಿ ಹೆಸರು ವಿಳಾಸ ಟೆಂಡರ್ ಮೊತ್ತ ಇತ್ಯಾದಿಗಳನ್ನು ಸ್ಪಷ್ಟವಾಗಿ ದಾಖಲಿಸಿ ಸಹಿ ಮಾಡಿರಬೇಕು. ಇಲ್ಲದಿದ್ದಲ್ಲಿ ಅಪೂರ್ಣ ಟೆಂಡರ್ ಎಂದು ಪರಿಗಣಿಸಿ ತಿರಸ್ಕರಿಸಲಾಗುವುದು.

ಮೇಲಿನ ಕ್ಷೇತ್ರಗಳ ಫಸಲನ್ನು ಟೆಂಡರ್ ಅನುಮೋದನೆಯಿಂದ ದಿನಾಂಕದಿಂದ 10 ದಿನಗಳೊಳಗಾಗಿ ಪೂರ್ಣ ಮೊತ್ತವನ್ನು ಪಾವತಿಸಿ ಫಸಲನ್ನು ರೂಢಿಸಿಕೊಳ್ಳಬಹುದಾಗಿದೆ. ಸದರಿ ಟೆಂಡರ್ ಪ್ರಕ್ರಿಯೆಯನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಇಲಾಖಾ ಅಧಿಕಾರಿಗಳು ಪಡೆದಿರುತ್ತಾರೆ. ಇಲಾಖಾ ಅಧಿಕಾರಿಗಳ ತೀರ್ಮಾನವೇ ಅಂತಿಮವಾದದ್ದು, ಹೆಚ್ಚಿನ ವಿವರಗಳನ್ನು ಈ ಕೆಳ ಸಹಿದಾರರ ಕಚೇರಿಯಲ್ಲಿ ಪಡೆಯಬಹುದಾಗಿದೆ.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,
(ರಾಜ್ಯ ವಲಯ) ತುಮಕೂರು.

ಪಿ.ಆರ್.135

## ಆರ್ಥಿಕ ಇಲಾಖೆ

## ಅಧಿಸೂಚನೆ

### ಸಂಖ್ಯೆ:ಆಇ 393 ವಾತೆಸಿ 2005, ಬೆಂಗಳೂರು, ದಿನಾಂಕ:17ನೇ ಫೆಬ್ರವರಿ, 2006

ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997ರಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಈ ಕೆಳಕಂಡ ಅಭ್ಯರ್ಥಿಗಳನ್ನು ವಾಣಿಜ್ಯ ತೆರಿಗೆ ಅಧಿಕಾರಿ(ಗ್ರೂಪ್-ಬಿ) ಹುದ್ದೆಗೆ ಆಯ್ಕೆ ಮಾಡಿ ಆಯ್ಕೆ ಪಟ್ಟಿಯನ್ನು ಅಧಿಸೂಚನೆ ಸಂಖ್ಯೆ:ಇ(1) 1235/2005-06 ಪಿಎಸ್‌ಸಿ ದಿನಾಂಕ 29-11-2005ರ ರಾಜ್ಯ ಪತ್ರದಲ್ಲಿ ಪ್ರಕಟಿಸಿದೆ:

| ಕ್ರ.ಸಂ. | ಹೆಸರು ಶ್ರೀಮತಿ/ಶ್ರೀ | ವಿಳಾಸ |
|---|---|---|
| 1. | ರಂಗನಾಥ ಟಿ. | ಕೇರಾಫ್ ತಮ್ಮಯ್ಯ ಟಿ., ನೆಲಮಹಡಿ, ಸಾಯಿ ಭಜನ್ ಮಂದಿರ, ಕೇಶವಪುರ, ಹಳೆ ಭದ್ರಾವತಿ ನಗರ, ಶಿವಮೊಗ್ಗ ಜಿಲ್ಲೆ-577 301. |
| 2. | ವೆಂಕಟೇಶ ಮೂರ್ತಿ ಟಿ.ಎಸ್. | ಮನೆ ನಂ.205, 2ನೇ ಕ್ರಾಸ್, ಸಿಎಫ್‌ಆರ್‌ಟಿಐ ಲೇ ಔಟ್, ಬೋಗಾದಿ 2ನೇ ಹಂತ(ದಕ್ಷಿಣ), ಮೈಸೂರು-570 006. |
| 3. | ಫಣಿರಾಜ್ ಡಿ.ಎ. | ಕೇರಾಫ್ ಶಾರದಾದೇವಿ, ದೊಡ್ಡಬೆಲೆ ಅಂಚೆ, ನೆಲಮಂಗಲ ತಾಲ್ಲೂಕು, ಬೆಂಗಳೂರು ಜಿಲ್ಲೆ-562 132. |
| 4. | ಭರತ್ ಕುಮಾರ್ ಹೆಗಡೆ | ಕೇರಾಫ್ ಎಸ್.ಕೆ.ಹೆಗಡೆ, ನಂ.2952, 13-ಬಿ ಮುಖ್ಯ ರಸ್ತೆ, ಆರ್.ಪಿ.ಸಿ.ಲೇ ಔಟ್, ವಿಜಯನಗರ 2ನೇ ಹಂತ, ಬೆಂಗಳೂರು-560 040. |
| 5. | ಶಾರದ ಎಸ್.ಜೆ. | ಕೇರಾಫ್ ಡಾ:ರೇವಣ್ಣಸಿದ್ದಪ್ಪ, ತಿಲಕನಗರ 2ನೇ ಕ್ರಾಸ್, ಶಿವಮೊಗ್ಗ-577 201. |
| 6. | ಲಿಂಗಣ್ಣ ಕೂಚಬಾಳ | ಕೇರಾಫ್ ಹೆಚ್.ಜಿ.ಗುಂಡಳ್ಳಿ, ಜೆ.ಇ.ಬಿಡಿಜ ಕ್ವಾಟ್ರಸ್, ಅಧ್ಯಾಪಕ್ ನಗರ, ಹುಬ್ಬಳ್ಳಿ-580 032. |
| 7. | ಶ್ರೀನಿವಾಸು ಆರ್.ಬಿ. | ಕೇರಾಫ್ ಬಸವೇಗೌಡ, ರಂಗುಪುರ ಹೊರೆಯಾಲ ಅಂಚೆ, ಗುಂಡ್ಲುಪೇಟೆ ತಾಲ್ಲೂಕು, ಚಾಮರಾಜನಗರ ಜಿಲ್ಲೆ-571 109. |
| 8. | ರೇಷ್ಮ ವಿ. | ನಂ.34, ಸತ್ಯನಾರಾಯಣ ಲೇಔಟ್, 3ನೇ ಹಂತ, 4ನೇ ಬ್ಲಾಕ್, ವೆಸ್ಟ್ ಆಫ್ ಕಾರ್ಡ್ ರಸ್ತೆ, ಬಸವೇಶ್ವರನಗರ, ಬೆಂಗಳೂರು-560 079. |

| ಕ್ರ.ಸಂ. | ಹೆಸರು<br>ಶ್ರೀಮತಿ/ಶ್ರೀ | ವಿಳಾಸ |
|---|---|---|
| 9. | ಚಂದ್ರಕಾಂತ್ ಎಂ.ಲೋಕರೆ | ಕೇರಾಫ್ ಎನ್.ಕೆ.ಹೊನ್ನುನಗರ್,<br>ದೇವಿ ಕೃಪ ಬಿಲ್ಡಿಂಗ್, 10ನೇ ಕ್ರಾಸ್, ಕಲ್ಯಾಣ ನಗರ,<br>ಧಾರವಾಡ–580 007. |
| 10. | ಪಾಟೀಲ್ ಶಿವಲಿಂಗಮ್ಮ | ಕೇರಾಫ್ ಎಂ.ಎಸ್.ಘಾಂಟೆ,<br>ನಂ.1–465, ಶೈಲೇಶ್ ನಿವಾಸ್,<br>ವಿ.ಜಿ.ವಿಮೆನ್ಸ್ ಕಾಲೇಜ್ ಎದುರು, ಹಳೇ ಜಾಜಿ ಜೈಲ್,<br>ಗುಲ್ಬರ್ಗಾ–585 102. |
| 11. | ಕುಸುಮ ಕುಮಾರಿ ಎಸ್. | ನಂ.705, 7ನೇ ಬಿ ಮುಖ್ಯ ರಸ್ತೆ,<br>ಹೆಚ್.ಆರ್.ಬಿ.ಆರ್. ಲೇ ಔಟ್, 1ನೇ ಬ್ಲಾಕ್, ಕಲ್ಯಾಣ ನಗರ,<br>ಬೆಂಗಳೂರು–560 043. |
| 12. | ಸದಾಶಿವ್ ರಾಜಶೇಖರ್ ಪಾಟೀಲ್ | ಕಂದಗಲ್ ಅಂಚೆ, ಬೀಳಗಿ ತಾಲ್ಲೂಕು,<br>ಬಾಗಲಕೋಟೆ ಜಿಲ್ಲೆ–587 116. |
| 13. | ಶಬನಾ ತಬಸ್ಸುಂ | ಕೇರಾಫ್ ಸೈಯ್ಯದ್ ಸಮಿವುಲ್ಲಾ,<br>ಮನೆ ನಂ.1100, ಬೇತಮಂಗಲ ಹಳೆ ನಗರ,<br>ಬಂಗಾರಪೇಟೆ ತಾಲ್ಲೂಕು, ಕೋಲಾರ ಜಿಲ್ಲೆ–563 116. |

2) ಈ ಆಯ್ಕೆಯು 1999ಕ್ಕೆ ಸೇರಿರುತ್ತದೆ. ಈ ಆಯ್ಕೆಯಲ್ಲಿ ಸೇರಿದ ಹುದ್ದೆಗಳನ್ನು ಬಿಡುಗಡೆ ಮಾಡುವ ಮೊದಲು ಸರ್ಕಾರವು ಕರ್ನಾಟಕ ಲೋಕಸೇವಾ ಆಯೋಗಕ್ಕೆ 1997ರವರೆಗೆ ಲಭ್ಯವಾಗಿದ್ದ ಎಲ್ಲಾ ಖಾಲಿ ಹುದ್ದೆಗಳನ್ನು ಅಧಿಸೂಚನೆ ನೀಡಲು ದಿನಾಂಕ 03–11–1997 ಮತ್ತು 04–12–1998ರಂದು ಬಿಡುಗಡೆ ಮಾಡಿತ್ತು. ಆ ಹುದ್ದೆಗಳಿಗೆ ಅರ್ಜಿಗಳನ್ನು ಆಹ್ವಾನಿಸಿ ಲೋಕಸೇವಾ ಆಯೋಗವು ದಿನಾಂಕ:09–03–1998ರಂದು ಅಧಿಸೂಚನೆ ನೀಡಿತ್ತು. ತದನಂತರ ಆಯ್ಕೆ ಪಟ್ಟಿಯನ್ನು ಪ್ರಕಟಿಸಿತ್ತು. ಇದನ್ನು ಕರ್ನಾಟಕ ಆಡಳಿತ ನ್ಯಾಯ ಮಂಡಳಿ, ಉಚ್ಚ ನ್ಯಾಯಾಲಯ ಮತ್ತು ಸರ್ವೋಚ್ಚ ನ್ಯಾಯಾಲಯಗಳ ಮುಂದೆ ಆಕ್ಷೇಪಿಸಲಾಗಿದ್ದು, ಸರ್ವೋಚ್ಚ ನ್ಯಾಯಾಲಯ ವಿಶೇಷ ಅರ್ಜಿಗಳನ್ನು ತನ್ನ ಆದೇಶ ದಿನಾಂಕ 06–10–2005ರಲ್ಲಿ ವಿಲೆ ಮಾಡಿದ್ದು, ಆ ಆಯ್ಕೆಯನ್ನು ಇನ್ನೂ ಪೂರ್ಣಗೊಳಿಸಬೇಕಾಗಿದೆ. ಈ ಹಿಂದಿನ ಗುಂಪಾದ 1998ರ ಆಯ್ಕೆಯಲ್ಲಿನ ವಿಳಂಬಕ್ಕೆ ಆಯ್ಕೆ ಹೊಂದಿದ ಅಭ್ಯರ್ಥಿಗಳು ಕಾರಣರಾಗುವುದಿಲ್ಲ. ಆ ಗುಂಪು ಆಯ್ಕೆಯಲ್ಲಿ ಆಗಿರುವ ವಿಳಂಬಕ್ಕೆ ಯಶಸ್ವಿಯಾಗುವ ಅಭ್ಯರ್ಥಿಗಳನ್ನು ದೂರುವುದಾಗಲೀ ಮತ್ತು ಜವಾಬ್ದಾರಿ ಹೊರಿಸುವುದಾಗಲೀ ಸೂಕ್ತವಾಗುವುದಿಲ್ಲ. ಆ ಅಭ್ಯರ್ಥಿಗಳನ್ನು ತದನಂತರ ಉದ್ಭವಿಸಿದ ಹುದ್ದೆಗಳಿಗೆ ಅಧಿಸೂಚನೆ ಮಾಡಿದ್ದು ಮತ್ತು ಆಯ್ಕೆಯ ಪ್ರಕ್ರಿಯೆಯನ್ನು ಮುಂದುವರೆಸಿ ಬಂದ ಅಭ್ಯರ್ಥಿಗಳಿಗಿಂತ ಕಿರಿಯರನ್ನಾಗಿ ಮಾಡುವುದು ಸಮಂಜಸವಲ್ಲ. ಆದಾಗ್ಯೂ, ತದನಂತರದ ಗುಂಪಿನ ಆಯ್ಕೆಯು ಪೂರ್ಣಗೊಂಡಿರುವುದರಿಂದ ಹಾಗೂ ಆಯ್ಕೆ ಹೊಂದಿದ ಅಧಿಕಾರಿಗಳ ಸೇವೆಯು ತುರ್ತಾಗಿ ಬೇಕಾಗಿರುವುದರಿಂದ, ಈ ಆಯ್ಕೆ ಪಟ್ಟಿಯನ್ನು ಬಾಕಿ ಇಡುವುದು ಸರಿಯಲ್ಲ. ಹುದ್ದೆಗಳು ಹಾಗೆಯೇ ಖಾಲಿ ಉಳಿದಿವೆ. ಮೇಲಿನ ಕಾರಣಗಳಿಂದ, 1999ನೇ ಗುಂಪಿನ ಆಯ್ಕೆ ಹೊಂದಿದ ಅಭ್ಯರ್ಥಿಗಳನ್ನು 1998ನೇ ಗುಂಪಿನ ಅಭ್ಯರ್ಥಿಗಳಿಗಿಂತ ಕಿರಿಯರೆಂದು ಪರಿಗಣಿಸುವುದು ಅಗತ್ಯ. ಜೇಷ್ಠತೆಯನ್ನು ಪಾಲಿಸುವ ಭರವಸೆಯು, 1998ರ ಗುಂಪಿನಲ್ಲಿ ಆಯ್ಕೆಗೊಳ್ಳುವ ಅಭ್ಯರ್ಥಿಗಳನ್ನು 1999ರ ಗುಂಪಿನಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳಿಗೆ ಹೋಲಿಸಿದಲ್ಲಿ, ಅವರ ಹಿತಾಸಕ್ತಿಯನ್ನು ಕಾಪಾಡುತ್ತದೆ. ಇದು ಅನಗತ್ಯ ವ್ಯಾಜ್ಯವನ್ನು ಸಹ ತಡೆಯುತ್ತದೆ. ಅದೇ ವೇಳೆಯಲ್ಲಿ, ಖಾಲಿ ಹುದ್ದೆಗಳನ್ನು ಸಾರ್ವಜನಿಕ ಹಿತಾಸಕ್ತಿಯಲ್ಲಿ ತುಂಬಬಹುದು. ಆದ್ದರಿಂದ ಈ ಅಧಿಸೂಚನೆಯಲ್ಲಿ ಸೇರಿದ ಅಭ್ಯರ್ಥಿಗಳು 1998ರ ಗುಂಪಿನಲ್ಲಿ ಆಯ್ಕೆಗೊಳ್ಳುವ ಅಭ್ಯರ್ಥಿಗಳಿಗಿಂತ ಕಿರಿಯರೆಂದು ತೀರ್ಮಾನಿಸಲಾಗಿದೆ.

3) ಮೇಲ್ಕಂಡ ಅಭ್ಯರ್ಥಿಗಳನ್ನು ರೂ.6000–11200ರ ವೇತನ ಶ್ರೇಣಿಯ ಹುದ್ದೆಗೆ ಪರಿವೀಕ್ಷಣೆಯ ಮೇಲೆ (on probation) ಈ ಮೂಲಕ ನೇಮಕ ಮಾಡಲಾಗಿದೆ.

4) ಪರೀಕ್ಷಾರ್ಥಿಗಳ ಪರೀಕ್ಷಾರ್ಥ ಅವಧಿಯು ಎರಡು ವರ್ಷಗಳಾಗಿರುತ್ತವೆ. ಈ ಅವಧಿಯಲ್ಲಿ ಪರೀಕ್ಷಾರ್ಥಿಗಳು ವಾಣಿಜ್ಯ ತೆರಿಗೆ ಅಧಿಕಾರಿ (ಗ್ರೂಪ್–ಬಿ) ಹುದ್ದೆಗೆ ನಿಗದಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಬೇಕು.

5) ಈ ನೇಮಕಾತಿಯು ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಅರ್ಜಿ ಸಂಖ್ಯೆ: 3389, 3390, 3392–3401 ಮತ್ತು 3405–3411/2004 ಮತ್ತು 209/2005 ಮತ್ತು 6610/2005 ಗಳಲ್ಲಿ ನ್ಯಾಯಮಂಡಳಿಯು ನೀಡುವ ಹಾಗೂ ರಿಟ್ ಪಿಟಿಷನ್(ಸಿವಿಲ್) ಸಂಖ್ಯೆ:232/99ರಲ್ಲಿ ಸುಪ್ರೀಂಕೋರ್ಟ್ ನೀಡುವ ಅಂತಿಮ ತೀರ್ಪಿಗೊಳಪಟ್ಟಿರುತ್ತದೆ.

6) ಈ ಅಧಿಸೂಚನೆಯನ್ನು ಅಂಚೆ ಮುಖಾಂತರ ರವಾನಿಸಿದ ದಿನಾಂಕದಿಂದ 15 ದಿನಗಳೊಳಗೆ ಅಭ್ಯರ್ಥಿಯು ವಾಣಿಜ್ಯ ತೆರಿಗೆಗಳ ಆಯುಕ್ತರು(ಕ), ವಾಣಿಜ್ಯ ತೆರಿಗೆಗಳ ಕಾರ್ಯಾಲಯ, ಗಾಂಧಿನಗರ, ಬೆಂಗಳೂರು ಇವರ ಮುಂದೆ ಕರ್ತವ್ಯಕ್ಕೆ ಹಾಜರಾಗತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಅಭ್ಯರ್ಥಿಯ ನೇಮಕಾತಿಯು ರದ್ದಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆಲಿಸ್ ಗೊನ್ಸಾಲ್ವಿಸ್**
ಪೀಠಾಧಿಕಾರಿ,
ಆರ್ಥಿಕ ಇಲಾಖೆ (ವಾ.ತೆ–2).

ಪಿ.ಆರ್.129

## ಆರ್ಥಿಕ ಇಲಾಖೆ
## ಅಧಿಸೂಚನೆ
### ಸಂಖ್ಯೆ:ಆಇ 21 ವಾತೆಸಿ 2006, ಬೆಂಗಳೂರು, ದಿನಾಂಕ:17ನೇ ಫೆಬ್ರವರಿ, 2006

ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997ರಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಈ ಕೆಳಕಂಡ ಅಭ್ಯರ್ಥಿಗಳನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು(ಗ್ರೂಪ್–ಎ) ಹುದ್ದೆಗೆ ಆಯ್ಕೆ ಮಾಡಿ ಆಯ್ಕೆ ಪಟ್ಟಿಯನ್ನು ಅಧಿಸೂಚನೆ ಸಂಖ್ಯೆ:ಇ(1) 1235/2005–06 ಪಿಎಸ್‌ಸಿ ದಿನಾಂಕ 29–11–2005ರ ರಾಜ್ಯ ಪತ್ರದಲ್ಲಿ ಪ್ರಕಟಿಸಿದೆ:

| ಕ್ರ.ಸಂ. | ಹೆಸರು<br>ಶ್ರೀಮತಿ/ಶ್ರೀ | ವಿಳಾಸ |
|---|---|---|
| 1. | ಸತೀಶ ಬಿ.ಸಿ. | ಎಕ್ಸ್‌ಟೆನ್ಷನ್ ಆಫೀಸರ್, (ಪಶು ಸಂಗೋಪನೆ),<br>ವೆಟರ್ನರಿ ಆಸ್ಪತ್ರೆ, ಕುಮಟಾ, ಉತ್ತರ ಕನ್ನಡ ಜಿಲ್ಲೆ–581 343. |
| 2. | ವೀರೇಂದ್ರ ಪಾಟೀಲ್ ಹೆಚ್. | ಕಿರಣ ನಿಲಯ,<br>ಜಿಲ್ಲಾ ಪಂಚಾಯತ್ ಕಛೇರಿ ಎದುರು,<br>ಬಸವನಗರ, ಹೊಸಪೇಟೆ ರಸ್ತೆ, ಹರಪ್ಪನ ಹಳ್ಳಿ ಅಂಚೆ,<br>ದಾವಣಗೆರೆ ಜಿಲ್ಲೆ–583 131. |
| 3. | ನಾಗರಾಜು ಬಿ.ಎಂ. | ಬೆಟ್ಟೇಗೌಡನ ದೊಡ್ಡಿ,<br>ನಾರಾಯಣಪುರ ಅಂಚೆ, ಕನಕಪುರ ತಾಲ್ಲೂಕು,<br>ಬೆಂಗಳೂರು ಜಿಲ್ಲೆ. |
| 4. | ಸವಿತ ಎಸ್.ಜಿ. | ನಂ.2186, ಎಸ್.ಬಿ.ಎಂ.ರಸ್ತೆ, ತುರುವೇಕೆರೆ,<br>ತುಮಕೂರು ಜಿಲ್ಲೆ–572 227. |
| 5. | ರಾಮಾನುಜಯ್ಯ ಎಸ್. | ನಂ.60, 3ನೇ ಕ್ರಾಸ್, ಚೋಳೂರು ಪಾಳ್ಯ,<br>ಬೆಂಗಳೂರು–560 023. |
| 6. | ಮಂಜುಳ ಎಮ್.ಆರ್. | ಕೇರಾಫ್ ರಾಜಶೇಖರ್ ಆರ್.,<br>ನಂ.2734, ಶ್ರೀ ನಿಲಯ, ಶಂಕರನಾರಾಯಣಸ್ವಾಮಿ<br>ಎಸ್.ಎನ್.ಎಸ್. ದೇವಸ್ಥಾನ ರಸ್ತೆ, ಚಾಮುಂಡಿಪುರ,<br>ಮೈಸೂರು– 570 004. |
| 7. | ಸುಮ ಎಂ.ಡಿ. | ನಂ.247, ಎಲ್.ಐ.ಜಿ.,<br>ಕುವೆಂಪುನಗರ, ಹಾಸನ– 573 201. |
| 8. | ಸುಕನ್ಯ ನಾಯಕ್ | ಕೇರಾಫ್ ಜಿ.ವಿ.ನಾಯಕ್,<br>ನಂ.345, ನಾರಾಯಣಪುರ,<br>ಧಾರವಾಡ–580 008. |

2) ಈ ಆಯ್ಕೆಯು 1999ಕ್ಕೆ ಸೇರಿರುತ್ತದೆ. ಈ ಆಯ್ಕೆಯಲ್ಲಿ ಸೇರಿದ ಹುದ್ದೆಗಳನ್ನು ಬಿಡುಗಡೆ ಮಾಡುವ ಮೊದಲು ಸರ್ಕಾರವು ಕರ್ನಾಟಕ ಲೋಕಸೇವಾ ಆಯೋಗಕ್ಕೆ 1997ರವರೆಗೆ ಲಭ್ಯವಾಗಿದ್ದ ಎಲ್ಲಾ ಖಾಲಿ ಹುದ್ದೆಗಳನ್ನು ಅಧಿಸೂಚನೆ ನೀಡಲು ದಿನಾಂಕ:03–11–1997 ಮತ್ತು 04–12–1998ರಂದು ಬಿಡುಗಡೆ ಮಾಡಿತ್ತು. ಆ ಹುದ್ದೆಗಳಿಗೆ ಅರ್ಜಿಗಳನ್ನು ಆಹ್ವಾನಿಸಿ ಲೋಕಸೇವಾ ಆಯೋಗವು ದಿನಾಂಕ:09–03–1998ರಂದು ಅಧಿಸೂಚನೆ ನೀಡಿತ್ತು. ತದನಂತರ ಆಯ್ಕೆ ಪಟ್ಟಿಯನ್ನು ಪ್ರಕಟಿಸಿತ್ತು. ಇದನ್ನು ಕರ್ನಾಟಕ ಆಡಳಿತ ನ್ಯಾಯ ಮಂಡಳಿ, ಉಚ್ಚ ನ್ಯಾಯಾಲಯ ಮತ್ತು ಸರ್ವೋಚ್ಚ ನ್ಯಾಯಾಲಯಗಳ ಮುಂದೆ ಆಕ್ಷೇಪಿಸಲಾಗಿದ್ದು, ಸರ್ವೋಚ್ಚ ನ್ಯಾಯಾಲಯ ವಿಶೇಷ ಅರ್ಜಿಗಳನ್ನು ತನ್ನ ಆದೇಶ ದಿನಾಂಕ 06–10–2005ರಲ್ಲಿ ವಿಲೆ ಮಾಡಿದ್ದು, ಆ ಆಯ್ಕೆಯನ್ನು ಇನ್ನೂ ಪೂರ್ಣಗೊಳಿಸಬೇಕಾಗಿದೆ. ಈ ಹಿಂದಿನ ಗುಂಪಾದ 1998ರ ಆಯ್ಕೆಯಲ್ಲಿನ ವಿಳಂಬಕ್ಕೆ ಆಯ್ಕೆ ಹೊಂದಿದ ಅಭ್ಯರ್ಥಿಗಳು ಕಾರಣರಾಗುವುದಿಲ್ಲ. ಆ ಗುಂಪು ಆಯ್ಕೆಯಲ್ಲಿ ಆಗಿರುವ ವಿಳಂಬಕ್ಕೆ ಯಶಸ್ವಿಯಾಗುವ ಅಭ್ಯರ್ಥಿಗಳನ್ನು ದೂರುವುದಾಗಲೀ ಮತ್ತು ಜವಾಬ್ದಾರಿ ಹೊರಿಸುವುದಾಗಲೀ ಸೂಕ್ತವಾಗುವುದಿಲ್ಲ. ಆ ಅಭ್ಯರ್ಥಿಗಳನ್ನು ತದನಂತರ ಉದ್ಭವಿಸಿದ ಹುದ್ದೆಗಳಿಗೆ ಅಧಿಸೂಚನೆ ಮಾಡಿದ್ದು ಮತ್ತು ಆಯ್ಕೆಯ ಪ್ರಕ್ರಿಯೆಯನ್ನು ಮುಂದುವರೆಸಿ ಬಂದ ಅಭ್ಯರ್ಥಿಗಳಿಗಿಂತ ಕಿರಿಯರನ್ನಾಗಿ ಮಾಡುವುದು ಸಮಂಜಸವಲ್ಲ. ಆದಾಗ್ಯೂ, ತದನಂತರದ ಗುಂಪಿನ ಆಯ್ಕೆಯು ಪೂರ್ಣಗೊಂಡಿರುವುದರಿಂದ ಹಾಗೂ ಆಯ್ಕೆ ಹೊಂದಿದ ಅಧಿಕಾರಿಗಳ ಸೇವೆಯು ತುರ್ತಾಗಿ ಬೇಕಾಗಿರುವುದರಿಂದ, ಈ ಆಯ್ಕೆ ಪಟ್ಟಿಯನ್ನು ಬಾಕಿ ಇಡುವುದು ಸರಿಯಲ್ಲ. ಹುದ್ದೆಗಳು ಹಾಗೆಯೇ ಖಾಲಿ ಉಳಿದಿವೆ. ಮೇಲಿನ ಕಾರಣಗಳಿಂದ, 1999ನೇ ಗುಂಪಿನ ಆಯ್ಕೆ ಹೊಂದಿದ ಅಭ್ಯರ್ಥಿಗಳನ್ನು 1998ನೇ ಗುಂಪಿನ ಅಭ್ಯರ್ಥಿಗಳಿಗಿಂತ ಕಿರಿಯರೆಂದು ಪರಿಗಣಿಸುವುದು ಅಗತ್ಯ. ಜೇಷ್ಠತೆಯನ್ನು ಪಾಲಿಸುವ ಭರವಸೆಯು, 1998ರ ಗುಂಪಿನಲ್ಲಿ ಆಯ್ಕೆಗೊಳ್ಳುವ ಅಭ್ಯರ್ಥಿಗಳನ್ನು 1999ರ ಗುಂಪಿನಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳಿಗೆ ಹೋಲಿಸಿದಲ್ಲಿ, ಅವರ ಹಿತಾಸಕ್ತಿಯನ್ನು ಕಾಪಾಡುತ್ತದೆ.ಇದು ಅನಗತ್ಯ ವ್ಯಾಜ್ಯವನ್ನು ಸಹ ತಡೆಯುತ್ತದೆ. ಅದೇ ವೇಳೆಯಲ್ಲಿ, ಖಾಲಿ ಹುದ್ದೆಗಳನ್ನು ಸಾರ್ವಜನಿಕ ಹಿತಾಸಕ್ತಿಯಲ್ಲಿ ತುಂಬಬಹುದು. ಆದ್ದರಿಂದ ಈ ಅಧಿಸೂಚನೆಯಲ್ಲಿ ಸೇರಿದ ಅಭ್ಯರ್ಥಿಗಳು 1998ರ ಗುಂಪಿನಲ್ಲಿ ಆಯ್ಕೆಗೊಳ್ಳುವ ಅಭ್ಯರ್ಥಿಗಳಿಗಿಂತ ಕಿರಿಯರೆಂದು ತೀರ್ಮಾನಿಸಲಾಗಿದೆ.

3) ಮೇಲ್ಕಂಡ ಅಭ್ಯರ್ಥಿಗಳನ್ನು ರೂ.7400–13120ರ ವೇತನ ಶ್ರೇಣಿಯ ಹುದ್ದೆಗೆ ಪರಿವೀಕ್ಷಣೆಯ ಮೇಲೆ (on probation) ಈ ಮೂಲಕ ನೇಮಕ ಮಾಡಲಾಗಿದೆ.

4) ಪರೀಕ್ಷಾರ್ಥಿಗಳ ಪರೀಕ್ಷಾರ್ಥ ಅವಧಿಯು ಎರಡು ವರ್ಷಗಳಾಗಿರುತ್ತವೆ. ಈ ಅವಧಿಯಲ್ಲಿ ಪರೀಕ್ಷಾರ್ಥಿಗಳು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ(ಗ್ರೂಪ್–ಎ) ಹುದ್ದೆಗೆ ನಿಗದಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಬೇಕು.

5) ಈ ನೇಮಕಾತಿಯು ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಅರ್ಜಿ ಸಂಖ್ಯೆ: 3389, 3390, 3392–3401 ಮತ್ತು 3405–3411/2004 ಮತ್ತು 209/2005 ಮತ್ತು 6610/2005 ಗಳಲ್ಲಿ ನ್ಯಾಯಮಂಡಳಿಯು ನೀಡುವ ಹಾಗೂ ರಿಟ್ ಪಿಟಿಷನ್(ಸಿವಿಲ್) ಸಂಖ್ಯೆ:232/99ರಲ್ಲಿ ಸುಪ್ರೀಂಕೋರ್ಟ್ ನೀಡುವ ಅಂತಿಮ ತೀರ್ಪಿಗೊಳಪಟ್ಟಿರುತ್ತದೆ.

6) ಈ ಅಧಿಸೂಚನೆಯನ್ನು ಅಂಚೆ ಮುಖಾಂತರ ರವಾನಿಸಿದ ದಿನಾಂಕದಿಂದ 15 ದಿನಗಳೊಳಗೆ ಅಭ್ಯರ್ಥಿಯು ವಾಣಿಜ್ಯ ತೆರಿಗೆಗಳ ಆಯುಕ್ತರು(ಕ), ವಾಣಿಜ್ಯ ತೆರಿಗೆಗಳ ಕಾರ್ಯಾಲಯ, ಗಾಂಧಿನಗರ, ಬೆಂಗಳೂರು ಇವರ ಮುಂದೆ ಕರ್ತವ್ಯಕ್ಕೆ ಹಾಜರಾಗತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಅಭ್ಯರ್ಥಿಯ ನೇಮಕಾತಿಯು ರದ್ದಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆಲಿಸ್ ಗೋನ್ಸಾಲ್ವಿಸ್**

ಪೀಠಾಧಿಕಾರಿ,

ಆರ್ಥಿಕ ಇಲಾಖೆ (ವಾ.ತೆ–2).

ಪಿ.ಆರ್.130

## ಆರ್ಥಿಕ ಇಲಾಖೆ

## ಅಧಿಸೂಚನೆ

**ಸಂಖ್ಯೆ:ಎಫ್‌ಡಿ 224 ಇಪಿಎಸ್ 2005, ಬೆಂಗಳೂರು, ದಿನಾಂಕ:30ನೇ ಜನವರಿ, 2006**

ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997ರಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಈ ಕೆಳಕಂಡ ಅಭ್ಯರ್ಥಿಗಳನ್ನು ಅಬಕಾರಿ ಉಪ ಅಧೀಕ್ಷಕ ಹುದ್ದೆಗೆ ಆಯ್ಕೆ ಮಾಡಿ ಆಯ್ಕೆ ಪಟ್ಟಿಯನ್ನು ಅಧಿಸೂಚನೆ ಸಂಖ್ಯೆ:ಇ(1) 1235/2005–06 ಪಿಎಸ್‌ಸಿ ದಿನಾಂಕ 29–11–2005ರ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಿದೆ:

1. ಶ್ರೀ ಗಿರಿ ಜೆ.

ಕೇರ್ ಆಫ್ ಹರೀಶ್ ಸಿ., ಸಂ.838, 5ನೇ ಅಡ್ಡರಸ್ತೆ, 5ನೇ ಮುಖ್ಯರಸ್ತೆ, ಎಂ.ಸಿ.ಲೇಔಟ್, ವಿಜಯನಗರ, ಬೆಂಗಳೂರು–40.

2. ಶ್ರೀ ನಾಗೇಶ್ ಎ.ಎಲ್.

ಸನ್ ಆಫ್ ಲಿಂಗೇಗೌಡ, ಅಲತೂರ, ಗುಂಡ್ಲುಪೇಟೆ ತಾಲ್ಲೂಕು, ಚಾಮರಾಜನಗರ ಜಿಲ್ಲೆ, ಪಿನ್–571109.

3. ಶ್ರೀ ನಾಗರಾಜಪ್ಪ ಎಸ್. ಸನ್ ಆಫ್ ಬಿ.ಎಂ. ಶಿವಪ್ಪ,

ಬಸವಟ್ಟಿ ಸಂತೇಮರಹಳ್ಳಿ ಅಂಚೆ, ಚಾಮರಾಜನಗರ ತಾಲ್ಲೂಕು ಮತ್ತು ಜಿಲ್ಲೆ ಪಿನ್–571115.

4. ಶ್ರೀ ಜಗದೀಶ್ ಸಿ.

ನಂ.335, 2ನೇ ಮುಖ್ಯರಸ್ತೆ, 2ನೇ ಬ್ಲಾಕ್, 3ನೇ ಸ್ಟೇಜ್, 3ನೇ ಫೇಸ್, ಬನಶಂಕರಿ, ಬೆಂಗಳೂರು–85.

5. ಶ್ರೀಮತಿ ಸುಮಿತಾ ಕೆ.ಕೆ.

ಕೇರ್ ಆಫ್ ನಿಂಗರಾಜು, ನಂ.ಡಿಎ–17, ಕೆಹೆಚ್‌ಬಿ ಕ್ವಾರ್ಟರ್ಸ್, ಕೆಹೆಚ್‌ಬಿ ರಸ್ತೆ, ಕಾವಲ್ ಭೈರಸಂದ್ರ, ಬೆಂಗಳೂರು–32.

6. ಶ್ರೀ ಗೋಪಾಲಕೃಷ್ಣಗೌಡ ಪಿ.

ಪುಯಿಲ ಹೌಸ್, ನೆಕ್ಕಿಲಾಡಿ ಗ್ರಾಮ, ಮರ್ಧಾಳಿ ಅಂಚೆ, ಪುತ್ತೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ, ಪಿನ್–574230.

ಈ ಆಯ್ಕೆಯು 1999ಕ್ಕೆ ಸೇರಿರುತ್ತದೆ. ಈ ಆಯ್ಕೆಯಲ್ಲಿ ಸೇರಿದ ಹುದ್ದೆಗಳನ್ನು ಬಿಡುಗಡೆ ಮಾಡುವ ಮೊದಲು, ಸರ್ಕಾರವು ಕರ್ನಾಟಕ ಲೋಕಸೇವಾ ಆಯೋಗಕ್ಕೆ 1997ರವರೆಗೆ ಲಭ್ಯವಾಗಿದ್ದ ಎಲ್ಲಾ ಖಾಲಿ ಹುದ್ದೆಗಳನ್ನು ಅಧಿಸೂಚನೆ ನೀಡಲು ದಿನಾಂಕ: 03.11.1997 ಮತ್ತು 04.12.1998ರಂದು ಬಿಡುಗಡೆ ಮಾಡಿತ್ತು. ಆ ಹುದ್ದೆಗೆ ಅರ್ಜಿಗಳನ್ನು ಆಹ್ವಾನಿಸಿ ಲೋಕಸೇವಾ ಆಯೋಗವು ದಿನಾಂಕ:09.03.1998ರಂದು ಅಧಿಸೂಚನೆ ನೀಡಿತ್ತು. ತದನಂತರ ಆಯ್ಕೆಪಟ್ಟಿಯನ್ನು ಪ್ರಕಟಿಸಿತ್ತು. ಇದನ್ನು ಕರ್ನಾಟಕ ಆಡಳಿತ ನ್ಯಾಯಮಂಡಲಿ, ಉಚ್ಚ ನ್ಯಾಯಾಲಯ ಮತ್ತು ಸರ್ವೋಚ್ಚ ನ್ಯಾಯಾಲಯಗಳ ಮುಂದೆ ಆಕ್ಷೇಪಿಸಲಾಗಿದ್ದು, ಸರ್ವೋಚ್ಚ ನ್ಯಾಯಾಲಯವು ವಿಶೇಷ ಅರ್ಜಿಗಳನ್ನು ತನ್ನ ಆದೇಶ ದಿನಾಂಕ: 06.10.2005ರಲ್ಲಿ ವಿಲೆ ಮಾಡಿದ್ದು, ಆ ಆಯ್ಕೆಯನ್ನು ಇನ್ನೂ ಪೂರ್ಣಗೊಳಿಸಬೇಕಾಗಿದೆ. ಈ ಹಿಂದಿನ ಗುಂಪಾದ 1998ರ ಆಯ್ಕೆಯಲ್ಲಿನ ವಿಳಂಬಕ್ಕೆ. ಆಯ್ಕೆ ಹೊಂದಿದ ಅಭ್ಯರ್ಥಿಗಳು ಕಾರಣರಾಗುವುದಿಲ್ಲ. ಆ ಅಭ್ಯರ್ಥಿಗಳನ್ನು ದುರುವುದಾಗಲಿ ಮತ್ತು ಜವಬ್ದಾರಿ ಹೊರಿಸುವುದಾಗಲಿ ಸೂಕ್ತವಾಗಿರುವುದಿಲ್ಲ. ಆ ಅಭ್ಯರ್ಥಿಗಳನ್ನು ತದನಂತರ ಉದ್ಭವಿಸಿದ ಹುದ್ದೆಗಳಿಗೆ ಅಧಿಸೂಚನೆ ಮಾಡಿದ್ದು ಮತ್ತು ಆಯ್ಕೆಯ ಪ್ರಕ್ರಿಯೆಯನ್ನು ಮುಂದುವರಿಸಿ ಬಂದ ಅಭ್ಯರ್ಥಿಗಳಿಗಿಂತ ಕಿರಿಯರನ್ನಾಗಿ ಮಾಡುವುದು ಸಮಂಜಸವಲ್ಲ.ಸ ಆದಾಗ್ಯೂ ತದನಂತರದ ಗುಂಪಿನ ಆಯ್ಕೆಯು ಪೂರ್ಣಗೊಂಡಿರುವುದರಿಂದ, ಹಾಗೂ ಆಯ್ಕೆ ಹೊಂದಿದ ಅಭ್ಯರ್ಥಿಗಳ ಸೇವೆಯು ತುರ್ತಾಗಿ ಬೇಕಾಗಿರುವುದರಿಂದ, ಈ ಆಯ್ಕೆಪಟ್ಟಿಯನ್ನು ಬಾಕಿ ಇಡುವುದು ಸರಿಯಲ್ಲ. ಹುದ್ದೆಗಳು ಹಾಗೆಯೇ ಖಾಲಿ ಉಳಿದಿವೆ. ಮೇಲಿನ ಕಾರಣಗಳಿಂದ, 1999ನೇ ಗುಂಪಿನಲ್ಲಿ ಆಯ್ಕೆ ಹೊಂದಿದ ಅಭ್ಯರ್ಥಿಗಳನ್ನು 1998ನೇ ಗುಂಪಿನ ಅಭ್ಯರ್ಥಿಗಳಿಗಿಂತ ಕಿರಿಯರೆಂದು ಪರಿಗಣಿಸುವುದು ಅಗತ್ಯ. ಜೇಷ್ಠತೆಯನ್ನು ಪಾಲಿಸುವ ಭರವಸೆಯು, 1998ರ ಗುಂಪಿನಲ್ಲಿ ಆಯ್ಕೆಗೊಳ್ಳುವ ಅಭ್ಯರ್ಥಿಗಳನ್ನು 1999ರ ಗುಂಪಿನಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳಿಗೆ ಹೋಲಿಸಿದಲ್ಲಿ, ಅವರ ಹಿತಾಸಕ್ತಿಯನ್ನು ಕಾಪಾಡುತ್ತದೆ. ಇದು ಅನಗತ್ಯ ವ್ಯಾಜ್ಯವನ್ನು ಸಹ ತಡೆಯುತ್ತದೆ. ಅದೇ ವೇಳೆಯಲ್ಲಿ, ಖಾಲಿ ಇರುವ ಹುದ್ದೆಗಳನ್ನು ಸಾರ್ವಜನಿಕ ಹಿತಾಸಕ್ತಿಯಲ್ಲಿ ತುಂಬಬಹುದು. ಆದ್ದರಿಂದ ಈ ಅಧಿಸೂಚನೆಯಲ್ಲಿ ಸೇರಿದ ಅಭ್ಯರ್ಥಿಗಳು 1998 ಗುಂಪಿನಲ್ಲಿ ಆಯ್ಕೆಗೊಳ್ಳುವ ಅಭ್ಯರ್ಥಿಗಳಿಗಿಂತ ಕಿರಿಯರೆಂದು ತೀರ್ಮಾನಿಸಲಾಗಿದೆ.

ಮೇಲ್ಕಂಡ ಅಭ್ಯರ್ಥಿಗಳನ್ನು ರೂ. 5575–125–5700–150–7200–200–8800–260–10620 ವೇತನ ಶ್ರೇಣಿಯ ಅಬಕಾರಿ ಉಪ ಸಧೀಕ್ಷಕ ಹುದ್ದೆಗೆ ಪರಿವೀಕ್ಷಣೆಯ ಮೇಲೆ (On Probation) ಈ ಮೂಲಕ ನೇಮಕ ಮಾಡಲಾಗಿದೆ.

ಈ ಪರಿಕ್ಷಾರ್ಥಿಗಳ ಪರೀಕ್ಷಾರ್ಥ ಅವಧಿಯು ಎರಡು ವರ್ಷಗಳಾಗಿರುತ್ತದೆ. ಈ ಅವಧಿಯಲ್ಲಿ ಪರೀಕ್ಷಾರ್ಥಿಗಳು ಅಬಕಾರಿ ಉಪ ಅಧೀಕ್ಷಕ ಹುದ್ದೆಗೆ ನಿಗದಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಬೇಕು.

ಈ ನೇಮಕಾತಿಯು ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಮುಂದಿರುವ ಅರ್ಜಿ ಸಂ: 3389. 3390. 3392–3401 ಮತ್ತು 3405–3411:2004 ಮತ್ತು 209 2005 ಮತ್ತು 6610:2005ಗಳಲ್ಲಿ ನ್ಯಾಯಮಂಡಳಿಯು ನೀಡುವ ಹಾಗೂ ರಿಟ್ ಅರ್ಜಿ (ಸಿವಿಲ್) ಸಂ.232099ರಲ್ಲಿ ಸರ್ವೋಚ್ಚ ನ್ಯಾಯಾಲವು ನೀಡುವ ಅಂತಿಮ ತೀರ್ಪಿಗೊಳಪಟ್ಟಿರುತ್ತದೆ.

ಈ ಅಧಿಸೂಚನೆಯನ್ನು ನೊಂದಾಯಿತ ಅಂಚೆ ಮುಖಾಂತರ ರವಾನಿಸಿದ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಅಭ್ಯರ್ಥಿಯು ಅಬಕಾರಿ ಆಯುಕ್ತರು, ಒಕ್ಕಲಿಗರ ಭವನ, ಕಿತ್ತೂರು ರಾಣಿ ಚನ್ನಮ್ಮ ವೃತ್ತ ಬೆಂಗಳೂರು ಇವರ ಮುಂದೆ ಕರ್ತವ್ಯಕ್ಕೆ ಹಾಜರಾಗತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಅಭ್ಯರ್ಥಿಯ ನೇಮಕಾತಿಯು ರದ್ದಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಕೋದಂಡರಾಮ ಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಅಬಕಾರಿ).

ಪಿ.ಆರ್.133

## ಕಾರ್ಯಪಾಲಕ ಅಭಿಯಂತರರವರ ಕಛೇರಿ, ಲೋಕೋಪಯೋಗಿ ಇಲಾಖೆ, ಉಡುಪಿ ವಿಭಾಗ, ಉಡುಪಿ

## ಅಲ್ಪಾವಧಿ ಟೆಂಡರು ಪ್ರಕಟಣೆ (2ನೇ ಕರೆ)

### ನಂ.ಜಿ.ಎನ್.ಎಲ್./ ಎನ್.ಐ.ಟಿ./ ಯು.ಡಿ.ಎನ್./ 2005-2006/ ಚೆ೩, ದಿನಾಂಕ: 4ನೇ ಮಾರ್ಚ್, 2006

ಈ ಕೆಳಗಿನ ಕೆಲಸಕ್ಕಾಗಿ ಪ್ರತ್ಯೇಕ ಮೊಹರಾದ ಟೆಂಡರನ್ನು ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿಸಲಾದ ಅರ್ಹ ದರ್ಜೆಯ ಗುತ್ತಿಗೆದಾರರಿಂದ ಕೆಲಸದ ಹೆಸರನ್ನು ಮೊಹರಾದ ಲಕೋಟೆಯ ಮೇಲೆ ನಮೂದಿಸಿ ನಿಯಮಿತ ಫಾರಂನಲ್ಲಿ, ದ್ವಿಪ್ರತಿಯಲ್ಲಿ ಆಹ್ವಾನಿಸಲಾಗಿದೆ. ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಉಡುಪಿ ವಿಭಾಗ, ಉಡುಪಿ, ಇವರು ದಿನಾಂಕ: 17.03.2006ರ ಸಂಜೆ 4.00 ಗಂಟೆಯವರೆಗೆ ಟೆಂಡರನ್ನು ಸ್ವೀಕರಿಸುವರು, ಸಾಧ್ಯವಾದಲ್ಲಿ ಟೆಂಡರನ್ನು ಅದೇ ದಿನ ತೆರೆಯಲಾಗುವುದು.

ಖಾಲಿ ಟೆಂಡರು ಫಾರಂಗಳಿಗೆ ಅರ್ಜಿಗಳನ್ನು ನಿಗದಿಪಡಿಸಿದ ಬೆಲೆಯೊಂದಿಗೆ (ಇದನ್ನು ಹಿಂದಿರುಗಿಸಲಾಗುವುದಿಲ್ಲ) ದಿನಾಂಕ: 16.03.2006ರ ವರೆಗೆ ಕೆಲಸದ ಎಲ್ಲಾ ದಿನಗಳಂದು ಕಛೇರಿ ವೇಳೆಯಲ್ಲಿ ಸ್ವೀಕರಿಸಲಾಗುವುದು. ಅರ್ಜಿ ಜೊತೆಗೆ ಗುತ್ತಿಗೆದಾರರು ರಿಜಿಸ್ಟ್ರೇಶನ್ ಸರ್ಟಿಫೈಡ್ ಪ್ರತಿಯನ್ನು ಕಡ್ಡಾಯವಾಗಿ ಸಲ್ಲಿಸತಕ್ಕದ್ದು, ಖಾಲಿ ಟೆಂಡರು ಫಾರಂಗಳನ್ನು ಈ ಕಛೇರಿಯಲ್ಲಿ ದಿನಾಂಕ: 16.03.2006ರವರೆಗೆ ನೀಡಲಾಗುವುದು.

**2ನೇ ಕರೆ**

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿರಿಸಿದ ಅಂದಾಜು ಮೊತ್ತ | ಮುಂಗಡ ಠೇವಣಿ (ಇಎಂಡಿ) ರೂ. | ಕಾಮಗಾರಿ ಮುಗಿಸಲು ನಿಗದಿಪಡಿಸಿದ ಸಮಯ | ಟೆಂಡರ್ ನಮೂನೆ | ಟೆಂಡರ್ (ಫಾರಂ ಬೆಲೆ) | ಅರ್ಹ ಗುತ್ತಿಗೆದಾರರು |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. ಅ) | **ಪ್ಯಾಕೇಶ್-I** ಉಡುಪಿ ತಾಲ್ಲೂಕಿನ ಮಣಿಪುರ- ಕಟಪಾಡಿ ರಸ್ತೆಯ ಕಿ.ಮೀ.0.00 ರಿಂದ 1.80 ರವರೆಗಿನ ಆಯ್ದುಭಾಗಗಳಲ್ಲಿ ಮರು ಡಾಂಬರೀಕರಣ. | ರೂ. 23,94,400.00 | ರೂ.24,000.00 | 3 ತಿಂಗಳು | ದರವಾರು | ರೂ.2,800/- | IIನೇ ದರ್ಜೆ ಮತ್ತು ಮೇಲ್ಪಟ್ಟು |
| ಆ) | ಉಡುಪಿ ತಾಲ್ಲೂಕಿನ ಮಣಿಪುರ-ಕಟಪಾಡಿ ರಸ್ತೆಯ ಕಿಮೀ.1.85 ರಿಂದ 3.50 ರವರೆಗಿನ ಆಯ್ದಭಾಗಗಳಲ್ಲಿ ಮರು ಡಾಂಬರೀಕರಣ. | | | | | | |
| ಇ) | ಉಡುಪಿ ತಾಲ್ಲೂಕಿನ ಮಣಿಪುರ-ಕಟಪಾಡಿ ರಸ್ತೆಯ ಕಿಮೀ 3.50 ರಿಂದ 4.50 ರವರೆಗಿನ ಆಯ್ದಭಾಗಗಳಲ್ಲಿ ಮರು ಡಾಂಬರೀಕರಣ. | | | | | | |
| 2. ಅ) | **ಪ್ಯಾಕೇಶ್- II** ಉಡುಪಿ ತಾಲ್ಲೂಕಿನ ಹಳೇ ಮಂಗಳೂರು-ಬೈಂದೂರು-ಕರಾವಳಿ ರಸ್ತೆ, ಕಿಮೀ 60.00 ರಿಂದ 62.10 ರವರೆಗೆ ಮರು ಡಾಂಬರೀಕರಣ. | ರೂ. 16,14,579.00 | ರೂ.24,000.00 | 2 ತಿಂಗಳು | ದರವಾರು | ರೂ.2,250/- | IIನೇ ದರ್ಜೆ ಮತ್ತು ಮೇಲ್ಪಟ್ಟು |
| ಆ) | ಉಡುಪಿ ತಾಲ್ಲೂಕಿನ ಹಳೇ ಮಂಗಳೂರು-ಬೈಂದೂರು-ಕರಾವಳಿ ರಸ್ತೆ ಕಿ.ಮೀ.62.100 ರಿಂದ 63.60ರವೆರೆಗೆ ಮರು ಡಾಂಬರೀಕರಣ. | | | | | | |
| | | | | | | | |

**ಸೂಚನೆಗಳು:**

1) ಯಾವುದೇ ಟೆಂಡರನ್ನು ಅಥವಾ ಎಲ್ಲಾ ಟೆಂಡರನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಥವಾ ಅಂಗೀಕರಿಸುವ ಹಕ್ಕನ್ನು ಸಂಬಂಧಪಟ್ಟ ಇಲಾಖಾ ಅಧಿಕಾರಿಯವರು ಹೊಂದಿರುತ್ತಾರೆ.

2) ಇ.ಎಂ.ಡಿ. ಯನ್ನು ಪ್ಲೆಡ್ಜ್ ಮಾಡಲಾದ ರಾಷ್ಟ್ರೀಯ ಉಳಿತಾಯ ಸರ್ಟಿಫಿಕೇಟ್, ಬ್ಯಾಂಕ್ ಗ್ಯಾರಂಟಿ, ಕಾಲ್ ಡಿಪೋಜಿಟ್, ಡಿಮಾಂಡ್ ಡ್ರಾಫ್ಟ್, ರೂಪದಲ್ಲಿ ಸಲ್ಲಿಸುವುದು. ನಿಗದಿಪಡಿಸಿದ ಮುಂಗಡ ಠೇವಣಿಯೊಂದಿಗೆ ಸಲ್ಲಿಸಿರುವ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.

3) ಗುತ್ತಿಗೆದಾರರು ಟೆಂಡರ್ ಬಗ್ಗೆ ಅರ್ಜಿ ಸಲ್ಲಿಸುವಾಗ ಈ ತರಹದ ಅಂದರೆ ಪೇವರ್ ಫಿನಿಷರ್ ಕಾಮಗಾರಿ ನಿರ್ವಹಿಸಿದ ಅನುಭವ ಹೊಂದಿದವರಾಗಿರಬೇಕು.

4) ಕಾಮಗಾರಿಗೆ ಬೇಕಾದ ಡಾಂಬರನ್ನು ಗುತ್ತಿಗೆದಾರರೇ, ಸ್ವತಃ ಒದಗಿಸಿಕೊಳ್ಳತಕ್ಕದ್ದು, ಇದನ್ನು ಪರೀಕ್ಷೆ ಮಾಡಿಸಿ ಫಲಿತಾಂಶವು ಐ.ಎಸ್.ಎಸ್. ಗುಣ ಮಟ್ಟಕ್ಕೆ ಇರುವುದನ್ನು ಖಚಿತ ಪಡಿಸಿ ಕೆಲಸಕ್ಕೆ ಉಪಯೋಗಿಸತಕ್ಕದ್ದು. ಈ ಅಂಶವನ್ನು ಗುತ್ತಿಗೆದಾರರು ಟೆಂಡರು ಸಲ್ಲಿಸುವಾಗ ಗಮನಿಸುವುದು.

ಹೆಚ್ಚಿನ ವಿವರಗಳಿಗೆ ಈ ಕಛೇರಿಯನ್ನು ಸಂಪರ್ಕಿಸಬಹುದಾಗಿದೆ.

ಕಾರ್ಯಪಾಲಕ ಇಂಜಿನಿಯರ್,
ಲೋಕೋಪಯೋಗಿ ವಿಭಾಗ, ಉಡುಪಿ-576101.

ಪಿ.ಆರ್. 144

## ಉಪಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಕಾವೇರಿ ವನ್ಯ ಜೀವಿ ವಿಭಾಗ, ಕನಕಪುರ

## ಟೆಂಡರು ಪ್ರಕಟಣೆ

### ಸಂ.ಎ3/ ಬಿಯುಡಿ/ ಸಿಆರ್-81/ 2005-06, ದಿನಾಂಕ:28ನೇ ಫೆಬ್ರವರಿ, 2006

**ವಿಷಯ:** ಕಾವೇರಿ ವನ್ಯಜೀವಿ ವಿಭಾಗ ವ್ಯಾಪ್ತಿಯಲ್ಲಿ ಬರುವ ಭೀಮೇಶ್ವರಿ ಆನೆ ಕ್ಯಾಂಪಿನಲ್ಲಿರುವ ಆನೆಗಳಿಗೆ 2006-07ನೇ ಸಾಲಿಗೆ ಆಹಾರ ಸಾಮಗ್ರಿಗಳ ಪೂರೈಕೆಗಾಗಿ ಟೆಂಡರ್ ಕರೆಯುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ ಕರ್ನಾಟಕ ಅರಣ್ಯ ಇಲಾಖೆಯಲ್ಲಿ ನೊಂದಾಯಿತ ಅರಣ್ಯ ಗುತ್ತಿಗೆದಾರರಿಂದ ಕನಕಪುರ ವನ್ಯ ಜೀವಿ ವಲಯ ಮುತ್ತತ್ತಿ ಶಾಖೆಗೆ ಸೇರಿದ ಭೀಮೇಶ್ವರಿ ಪ್ರದೇಶದಲ್ಲಿ ಸ್ಥಾಪಿಸಿರುವ ಆನೆ ಕ್ಯಾಂಪಿನಲ್ಲಿ ಇರುವ 4 ಆನೆಗಳಿಗೆ ಹಾಗೂ 1 ಮರಿಯಾನೆಗೆ ದಿನಾಂಕ: 01.04.2006 ರಿಂದ 31.03.2007ರ ವರೆಗೆ ಬೇಕಾಗುವ ಆಹಾರ ಸಾಮಗ್ರಿಗಳ ಪೂರೈಕೆಗಾಗಿ ಮೊಹರಾದ ಟೆಂಡರನ್ನು ದಿನಾಂಕ: 25.03.2006ರಂದು ಮಧ್ಯಾಹ್ನ 3.00 ಗಂಟೆಗೆ ಈ ಕಛೇರಿಯಲ್ಲಿ ಕರೆಯಲಾಗಿದೆ. ಈ ದಿನ ಸಾರ್ವತ್ರಿಕ ರಜಾದಿನ ಎಂದು ಘೋಷಿಸಿದಲ್ಲಿ ಟೆಂಡರನ್ನು ಮುಂದಿನ ಕೆಲಸದ ದಿನದಂದು ಇದೇ ಸಮಯಕ್ಕೆ ಮುಂದೂಡಿ ನಡೆಸಲಾಗುವುದು ಸರಬರಾಜಿನ ಆಹಾರ ಪದಾರ್ಥಗಳ ವಿವರ ಈ ಕೆಳಕಂಡಂತೆ ಇರುತ್ತದೆ.

### ಆನೆಗಳಿಗೆ ಬೇಕಾಗಬಹುದಾದ ಆಹಾರ ಸಾಮಗ್ರಿಗಳ ವಿವರ

(1) ಆಲದ/ ಅತ್ತಿ/ ಬಸರಿ/ ಅರಳಿ ಕೊಂಬೆ ಸಹಿತ ಸೊಪ್ಪು, (2) ಭತ್ತದ ಹುಲ್ಲು, (3) ರಾಗಿಹಿಟ್ಟು, (4) ಹುರುಳಿ, (5) ಕುಸುಬಲಕ್ಕಿ (6) ಉಪ್ಪು, (7) ಬೆಲ್ಲ, (8) ತೆಂಗಿನಕಾಯಿ, (9) ಹರಳೆಣ್ಣೆ (10) ಬೇವಿನಎಣ್ಣೆ, (11) ಒಣಹುಲ್ಲು (12) ಉದ್ದಿನಕಾಳು (13) ಗೋಧಿ, (14) ಹೆಸರುಕಾಳು (15) ಕಬ್ಬು (16) ಭತ್ತ, (17) ಅವಲಕ್ಕಿ.

ಟೆಂಡರ್ ಫಾರಂಗಳನ್ನು ದಿನಾಂಕ: 23.03.2006ರಂದು 5.00 ಗಂಟೆಗೆವರೆಗೆ ರೂ.200/- ಮತ್ತು ಚಾಲ್ತಿಯಲ್ಲಿರುವ ತೆರಿಗೆಯನ್ನು ಪಾವತಿಸಿ ಈ ಕಛೇರಿಯಿಂದ ಪಡೆಯಬಹುದಾಗಿದೆ. ಹಾಗೂ ಮೊಹರಾದ ಟೆಂಡರ್ ಫಾರಂಗಳನ್ನು ದಿನಾಂಕ: 24.03.2005ರಂದು ಮಧ್ಯಾಹ್ನ 1.30 ಗಂಟೆವರೆಗೆ ಈ ಕಛೇರಿಯಲ್ಲಿ ಸ್ವೀಕರಿಸಲಾಗುವುದು.

ಈ ಹರಾಜನ್ನು ವಿವಿಧ ಕಾರಣಗಳಿಂದ ಅಂಗೀಕರಿಸಲು ಆಡಳಿತಾತ್ಮಕ ತೊಡಕುಗಳು ಬಂದಲ್ಲಿ ದಿನಾಂಕ: 06.04.2006ರಂದು ಮಧ್ಯಾಹ್ನ 3.00 ಗಂಟೆಗೆ ಇದೇ ಕಛೇರಿಯಲ್ಲಿ ಮತ್ತೆ ಮರು ಟೆಂಡರ್‌ನ್ನು ಮಾಡಲಾಗುತ್ತದೆ.

### ಷರತ್ತುಗಳು

1. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು (ವನ್ಯಜೀವಿ) ಬೆಂಗಳೂರು ರವರು ನಿಗದಿಪಡಿಸಿರುವ ಆನೆಯ ಆಹಾರ ಪಟ್ಟಿಯಲ್ಲಿ ತಿಳಿಸಿರುವ ಆಹಾರ ಸಾಮಗ್ರಿಗಳನ್ನು ಮಾತ್ರ ಗುತ್ತಿಗೆದಾರರಿಂದ ಖರೀದಿಸಲಾಗುತ್ತದೆ. ಉಳಿದ ವಿವಿಧ ರೀತಿಯ ಆಹಾರ ಸಾಮಗ್ರಿಗಳನ್ನು ಅವಶ್ಯಕತೆಗೆ ಅನುಸಾರವಾಗಿ ಅಥವಾ ವೈದ್ಯರ ಸಲಹೆಯಂತೆ ಖರೀದಿಸಲಾಗುತ್ತದೆ.

2. ಟೆಂಡರ್‌ನಲ್ಲಿ ಭಾಗವಹಿಸುವ ಗುತ್ತಿಗೆದಾರರು ತುಂಬಿದ ಟೆಂಡರ್ ಫಾರಂನ ಜೊತೆಗೆ ರೂ.10,000/- ಇ.ಎಂ.ಡಿ.ಯನ್ನು ಬ್ಯಾಂಕ್ ಡಿ.ಡಿ. ರೂಪದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕಾವೇರಿ ವನ್ಯಜೀವಿ ವಿಭಾಗ ಕನಕಪುರ ರವರ ಹೆಸರಿನಲ್ಲಿ ಸಲ್ಲಿಸಬೇಕು.

3. ಆಹಾರ ಸಾಮಗ್ರಿಗಳನ್ನು ಪ್ರತ್ಯೇಕವಾಗಿ ಸರಬರಾಜು ಮಾಡುವ ದರವನ್ನು ಪ್ರತಿ ಕೇಜಿಗೆ/ ಲೀಟರ್ ಐಟಂವಾರು ಸ್ಪಷ್ಟವಾಗಿ ನಮೂದಿಸಬೇಕು.

4. ಸರಬರಾಜು ಮಾಡುವ ಆಹಾರ ಪದಾರ್ಥಗಳ ಗುಣಮಟ್ಟದಿಂದ ಕೂಡಿರುವ ಬಗ್ಗೆ ನಿಗದಿಪಡಿಸಿದ ಪಶು ವೈದ್ಯಾಧಿಕಾರಿಗಳಿಂದ ದೃಢೀಕೃತಗೊಂಡಿರತಕ್ಕದ್ದು. ತಪ್ಪಿದ್ದಲ್ಲಿ ಸರಬರಾಜು ಮಾಡಿದ ಆಹಾರ ಸಾಮಗ್ರಿಗಳನ್ನು ತಿರಸ್ಕರಿಸಿ ನಿಬಂಧನೆಗಳ ಉಲ್ಲಂಘನೆಗೆ ಕ್ರಮ ಜರುಗಿಸಲಾಗುವುದು.

5. ಈ ಟೆಂಡರ್ ಅಧಿಸೂಚನೆಯಲ್ಲಿ ನಮೂದಿಸಿರುವ ಷರತ್ತುಗಳಲ್ಲದೆ ವಿವರವಾದ ಟೆಂಡರ್ ಅಧಿಸೂಚನೆಯಲ್ಲಿ ನಮೂದಿಸಿರುವ ಎಲ್ಲಾ ಷರತ್ತುಗಳಿಗೂ ಒಳಪಟ್ಟಿರಬೇಕು.

6. ಟೆಂಡರ್‌ನಲ್ಲಿ ಯಾವುದೇ ತಂಟೆತಕರಾರುಗಳು ಬಂದಲ್ಲಿ ಅರಣ್ಯ ಸಂರಕ್ಷಣಾಧಿಕಾರಿಗಳು, ಚಾಮರಾಜನಗರ ವೃತ್ತ, ಚಾಮರಾಜನಗರ ಇವರು ಕೈಗೊಳ್ಳುವ ತೀರ್ಮಾನವು ಅಂತಿಮವಾಗಿರುತ್ತದೆ.

7. ಟೆಂಡರನ್ನು ಯಾವುದೇ ಕಾರಣ ನೀಡದೆ ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ ಇವರಲ್ಲಿ ಕಾಯ್ದಿರಿಸಿದೆ.

8. ಟೆಂಡರ್‌ನಲ್ಲಿ ವಿವಿಧ ರೀತಿಯ ಪಡಿತರ ಸಾಮಗ್ರಿಗಳ ಸರಬರಾಜು ಮಾಡುವ ಬಗ್ಗೆ ಗುತ್ತಿಗೆದಾರರು ನಮೂದಿಸಿರುವ ದರಗಳಲ್ಲಿ ಒಂದಕ್ಕೊಂದು ಹೊಂದಾಣಿಕೆಯಾಗದ ಪಕ್ಕದಲ್ಲಿ ಟೆಂಡರ್‌ನ್ನು ರದ್ದುಗೊಳಿಸಲಾಗುವುದು.

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಕಾವೇರಿ ವನ್ಯಜೀವಿ ವಿಭಾಗ, ಕನಕಪುರ.

ಪಿ.ಆರ್. 145

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ

## ಸಂಕ್ಷಿಪ್ತ ಹರಾಜು ಇಸ್ತಿಹಾರ್ ಪ್ರಕಟಣೆ

### ಸಂ.ಎ3/ ಕಾವಜಿ/ ಹರಾಜು/ ಸಿಆರ್-82/ 2005-06, ದಿನಾಂಕ:28ನೇ ಫೆಬ್ರವರಿ, 2006

**ವಿಷಯ:** ಕಾವೇರಿ ವನ್ಯಧಾಮ ಪ್ರದೇಶದ ಒಳಗೆ ಬರುವ ಪ್ರವಾಸಿಗರಿಂದ ಪ್ರವೇಶ ಶುಲ್ಕ ವಸೂಲಿ ಮಾಡುವ ಕೆಲಸಕ್ಕೆ ಹರಾಜು ನಡೆಸುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಕಾವೇರಿ ವನ್ಯಜೀವಿ ವಿಭಾಗದ ವಿವಿಧ ಅರಣ್ಯಗಳ ವ್ಯಾಪ್ತಿಗೆ ಬರುವ ಈ ಕೆಳಕಂಡ ಪ್ರವಾಸಿಗರ ಪ್ರೇಕ್ಷಣೀಯ ಸ್ಥಳಗಳಿಗೆ ಬರುವ ಸದರಿ ವನ್ಯಧಾಮದ ಅರಣ್ಯ ವಾಸಿಗಳಲ್ಲದ ಪ್ರವಾಸಿಗರಿಂದ ವನ್ಯಧಾಮಕ್ಕೆ ಪ್ರವೇಶ ಶುಲ್ಕ, ವಾಹನ ನಿಲುಗಡೆ ಶುಲ್ಕ ವಸೂಲು ಮಾಡಲು ಈ ಮೂಲಕ ಹರಾಜನ್ನು ಕರೆಯಲಾಗಿದೆ. ಈ ವನ್ಯಧಾಮಕ್ಕೆ ಸದರಿ ಸಾಲಿಗೆ ಸರ್ಕಾರಿ ಆದೇಶ ಸಂಖ್ಯೆ: FEE.258.FWL.98 (part) ಸಂಖ್ಯೆ: ದಿನಾಂಕ:03.01.2001ರ ಪ್ರಕಾರ ಪ್ರತಿದಿನವೊಂದಕ್ಕೆ ಪ್ರವಾಸಿಗರಿಗೆ ನಿಗದಿಪಡಿಸಿದ ಪ್ರವೇಶಶುಲ್ಕ ರೂ.20/- (ಭಾರತೀಯರಿಗೆ) ರೂ.80/- (ವಿದೇಶಿಯರಿಗೆ) ವಸೂಲಾತಿ ಮಾಡಬೇಕಾಗಿರುವುದರಿಂದ, ಕೆಳಕಂಡ ಪ್ರದೇಶಗಳಲ್ಲಿ ವನ್ಯಧಾಮ ಪ್ರವೇಶ ಶುಲ್ಕವನ್ನು ದಿನಾಂಕ:01.04.2006 ರಿಂದ 31.03.2007ರವರೆಗೆ ವಸೂಲು ಮಾಡಲು ಉದ್ದೇಶಿಸಿರುವ ಸ್ಥಳಗಳಲ್ಲಿ ಈ ಮುಂದೆ ನಮೂದಿಸಿರುವ ದಿನಾಂಕಗಳಂದು ಬಹಿರಂಗ ಹರಾಜನ್ನು ಕೈಗೊಳ್ಳಲಾಗುತ್ತದೆ. ಸದರಿ ಕೆಲಸ ನಿರ್ವಹಿಸಲು ಇಚ್ಛೆಯುಳ್ಳವರು ಹರಾಜಿನಲ್ಲಿ ಭಾಗವಹಿಸಬಹುದೆಂದು ಸಾರ್ವಜನಿಕರಿಗೆ ಈ ಮೂಲಕ ತಿಳುವಳಿಕೆ ನೀಡಲಾಗಿದೆ.

| ಕ್ರ. ಸಂ. | ವಲಯ | | ಪ್ರವಾಸಿಗರಿಂದ ವನ್ಯಧಾಮದ ಪ್ರವೇಶ ಶುಲ್ಕ ಸಂಗ್ರಹಿಸಬೇಕಾದ ಸ್ಥಳದ ಹೆಸರು | ಹರಾಜು ನಡೆಯುವ ಸ್ಥಳ ಮತ್ತು ದಿನಾಂಕ |
|---|---|---|---|---|
| 1. | ಕನಕಪುರ ವನ್ಯಜೀವಿ ವಲಯ | 1. | ಬಸವನಬೆಟ್ಟ ಕಾಯ್ದಿಟ್ಟ ಅರಣ್ಯ ಪ್ರದೇಶದ ವ್ಯಾಪ್ತಿಗೆ ಬರುವ ಕೋಲಕೋಟೆ ಗೇಟ್. | ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಕನಕಪುರ ದಿನಾಂಕ: 27.03.2006ರ ಬೆಳಿಗ್ಗೆ 11.00 ಗಂಟೆಗೆ |
| | | 2. | ಬಸವನಬೆಟ್ಟ ಕಾಯ್ದಿಟ್ಟ ಅರಣ್ಯ ಪ್ರದೇಶದ ವ್ಯಾಪ್ತಿಗೆ ಬರುವ ಕೆಸರಿಕೆಹಳ್ಳ ಗೇಟ್, (ಬ್ಯಾಡರಹಳ್ಳಿ ಗ್ರಾಮ ಪಂಚಾಯಿತಿ ಪ್ರದೇಶ ಹೊರತುಪಡಿಸಿ) | |
| | | 3. | ಮುಗ್ಗೂರು ಅರಣ್ಯ ಪ್ರದೇಶದ ವ್ಯಾಪ್ತಿಗೆ ಬರುವ ಸಂಗಮ ಬೀಟು ಪ್ರದೇಶ. | |
| 2. | ಮಲೈ ಮಹದೇಶ್ವರ ಬೆಟ್ಟ ವನ್ಯಜೀವಿ ವಲಯ | 1. | ಕೊಕ್ಕರೆಹಳ್ಳದಿಂದ ಹೊಗೇನಕಲ್ ಫಾಲ್ಸ್ ರಸ್ತೆ. | ವಲಯ ಅರಣ್ಯಾಧಿಕಾರಿಗಳ ಕಛೇರಿ ಆವರಣ ಮಲೈ ಮಹದೇಶ್ವರ ಬೆಟ್ಟ ವನ್ಯಜೀವಿ ವಲಯ, ದಿನಾಂಕ: 23.03.2006 ಮಧ್ಯಾಹ್ನ 3.00 ಗಂಟೆಗೆ. |
| | | 2. | ಮಾರಿಕೊಟ್ಟಾಯಿ ವನ್ಯಧಾಮದ ಗಡಿ ಪ್ರದೇಶ. | |

ಈ ಹರಾಜನ್ನು ವಿವಿಧ ಕಾರಣಗಳಿಂದ ಅಂಗೀಕರಿಸಲು ಆಡಳಿತಾತ್ಮಕ ತೊಡಕುಗಳು ಬಂದಲ್ಲಿ ದಿನಾಂಕ: 31.03.2006ರಂದು ಬೆಳಿಗ್ಗೆ 12.00 ಗಂಟೆಗೆ ಅದೇ ಮೇಲ್ಕಾಣಿಸಿದ ಕಛೇರಿಗಳಲ್ಲಿ ಮತ್ತೆ ಮರು ಹರಾಜನ್ನು ಮಾಡಲಾಗುತ್ತದೆ.

**ನಿಬಂಧನೆಗಳು:**

1. ಹರಾಜಿನಲ್ಲಿ ತಿಳಿಸಿರುವ ಪ್ರವೇಶ ಶುಲ್ಕ ಸಂಗ್ರಹಿಸಲಾಗುವ ಪ್ರತಿ ಸ್ಥಳಗಳಿಗೆ ಪ್ರತ್ಯೇಕವಾಗಿ ಪ್ರವೇಶ ಶುಲ್ಕ ವಸೂಲಾತಿಗಾಗಿ ಹರಾಜು ಮಾಡಲಾಗುತ್ತದೆ.
2. ಹರಾಜಿನಲ್ಲಿ ಭಾಗವಹಿಸುವವರು ರೂ.5000.00 ಠೇವಣಿ ಪಾವತಿಸಿ, ಹರಾಜಿನಲ್ಲಿ ಭಾಗವಹಿಸಬಹುದಾಗಿದೆ.
3. ಯಶಸ್ವಿ ಬಿಡ್ಡುದಾರರು ಅವರವರ ಹೆಸರಿಗೆ ಆಗಿರುವ ವನ್ಯಧಾಮದ ಪ್ರವೇಶ ಶುಲ್ಕ ಸಂಗ್ರಹದ ಬಾಬ್ತಿನ ಪೂರ್ಣ ಹಣವನ್ನು ಆ ದಿನವೇ ಪಾವತಿಸತಕ್ಕದ್ದು ತಪ್ಪಿದ್ದಲ್ಲಿ ಯಶಸ್ವಿ ಬಿಡ್ಡುದಾರರ ಮುಂಗಡ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಹರಾಜನ್ನು ರದ್ದುಪಡಿಸಲಾಗುವುದು.
4. ಯಶಸ್ವಿ ಬಿಡ್ಡುದಾರರು ಈ ಕಛೇರಿಯಿಂದ ಕಾರ್ಯಾದೇಶ ದೊರೆತ ಕೂಡಲೇ ರೂ.200 ಛಾಪಾಕಾಗದದಲ್ಲಿ ಕೆಳಸಹಿದಾರರೊಡನೆ ನಿಬಂಧನೆಗಳೊಂದಿಗೆ ಕರಾರು ಒಪ್ಪಂದ ಮಾಡಿಕೊಳ್ಳತಕ್ಕದ್ದು.
5. ಯಶಸ್ವಿ ಬಿಡ್ಡುದಾರರು ಅವರು ಕೆಲಸ ನಿರ್ವಹಿಸಲಿರುವ ನಿಗದಿಪಡಿಸಿದ ಸ್ಥಳಗಳಲ್ಲಿ ಸಾರ್ವಜನಿಕರಿಂದ ಸಂಗ್ರಹಿಸಲಿರುವ ದರಗಳು ಹಾಗೂ ನಿಯಮಗಳ ಬಗ್ಗೆ ನಾಮಫಲಕಗಳನ್ನು ಹಾಕಿ ಕೆಲಸ ನಿರ್ವಹಿಸುವುದು.
6. ಯಶಸ್ವಿ ಬಿಡ್ಡುದಾರರು ವನ್ಯಧಾಮದ ವ್ಯಾಪ್ತಿಯಲ್ಲಿ ಬರುವ ಪ್ರದೇಶಗಳಿಂದ ಮಾತ್ರ ಸರ್ಕಾರಿ ಆದೇಶದಂತೆ ಪ್ರವೇಶ ಶುಲ್ಕ ಪ್ರವಾಸಿಗರಿಂದ ವಸೂಲಿ ಮಾಡತಕ್ಕದ್ದು ಹಾಗೂ ವನ್ಯಧಾಮದ ಹೊರವಲಯದಿಂದ ಪ್ರವೇಶ ಶುಲ್ಕ ಇತ್ಯಾದಿ ವಸೂಲಾತಿ ಬಗ್ಗೆ ತಂಟೆ ತಕರಾರುಗಳು ಬಂದಲ್ಲಿ ಈ ಕಛೇರಿಯು ಜವಾಬ್ದಾರರಲ್ಲ.
7. ಯಶಸ್ವಿ ಬಿಡ್ಡುದಾರರು ವನ್ಯಧಾಮದ ಹಿತದೃಷ್ಟಿಯಿಂದ ಅಕ್ರಮ ಚಟುವಟಿಕೆಗಳನ್ನು ತಡೆಯಲು ಇಲಾಖೆಯೊಂದಿಗೆ ಸಹಕರಿಸತಕ್ಕದ್ದು.
8. ಯಶಸ್ವಿ ಬಿಡ್ಡುದಾರರು ಅಕ್ರಮ ಚಟುವಟಿಕೆದಾರರೊಡನೆ ಶಾಮೀಲಾಗಿರುವುದು ಕಂಡು ಬಂದಲ್ಲಿ ಹಾಲಿ ಗುತ್ತಿಗೆಯನ್ನು ರದ್ದುಗೊಳಿಸುವುದಲ್ಲದೇ ಕಾನೂನಿನಂತೆ ಕ್ರಮ ಜರುಗಿಸಲಾಗುವುದು.
9. ಈ ಹಾರಜಿನಲ್ಲಿ ಯಾವುದೇ ವಿಧವಾದ ತಂಟೆ ತಕರಾರುಗಳು ಬಂದಲ್ಲಿ ಅರಣ್ಯ ಸಂರಕ್ಷಣಾಧಿಕಾರಿಗಳು, ಚಾಮರಾಜನಗರ ವೃತ್ತ, ಚಾಮರಾಜನಗರ ಇವರ ತೀರ್ಪು ಅಂತಿಮವಾಗಿರುತ್ತದೆ. ಇದಕ್ಕೆ ಬಿಡ್ಡುದಾರರು ಬದ್ಧರಾಗಿರಬೇಕು.
10. ಪ್ರವಾಸಿಗರಿಗೆ ವನ್ಯಧಾಮದ ಪ್ರವೇಶ ವೇಳೆಯನ್ನು ಬೆಳಿಗ್ಗೆ 6.00 ರಿಂದ ಸಂಜೆ 6.00 ರವರೆಗೆ ಇರುವಂತೆ ನಿಗದಿಪಡಿಸಿದೆ.

11. ಯಶಸ್ವಿ ಗುತ್ತಿಗೆದಾರರು ನೇಮಿಸಿಕೊಂಡ ಕೆಲಸದವರಿಗೆ ವನ್ಯಪ್ರಾಣಿಗಳಿಂದ ಅಪಘಾತಗಳು ಸಂಭವಿಸಿದಲ್ಲಿ ಅರಣ್ಯ ಇಲಾಖೆಯಿಂದ ಯಾವುದೇ ಪರಿಹಾರಕ್ಕೆ ಅರ್ಹರಾಗಿರುವುದಿಲ್ಲ.

12. ಯಾವುದೇ ಕಾರಣವಿಲ್ಲದೆ ಹರಾಜನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಕೆಳಸಹಿದಾರರಲ್ಲಿ ಕಾಯ್ದಿರಿಸಲಾಗಿದೆ.

13. ಯಶಸ್ವಿ ಬಿಡ್ಡುದಾರರು ವನ್ಯಧಾಮದಲ್ಲಿ ಪರಿಸರ ಮಾಲಿನ್ಯ ತಡೆಯಲು ಹೆಚ್ಚಿನ ನಿಗಾ ವಹಿಸುವುದು.

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಕಾವೇರಿ ವನ್ಯಜೀವಿ ವಿಭಾಗ, ಕನಕಪುರ.

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ

## ಸಂಕ್ಷಿಪ್ತ ಹರಾಜು ಇಸ್ತಿಹಾರ್ ಪ್ರಕಟಣೆ

**ಸಂ.ಎ3/ ಕಾವಜಿ/ ಹರಾಜು/ ಸಿಆರ್-83/ 2005-06, ದಿನಾಂಕ:28ನೇ ಫೆಬ್ರವರಿ, 2006**

**ವಿಷಯ:** ಕಾವೇರಿ ವನ್ಯಧಾಮ ವ್ಯಾಪ್ತಿಗೆ ಪ್ರವೇಶಿಸುವ ವಾಹನಗಳಿಂದ ವಾಹನ ನಿಲುಗಡೆ ಶುಲ್ಕ ವಸೂಲಿ ಮಾಡಲು ಹರಾಜು ನಡೆಸುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ ಕಾವೇರಿ ವನ್ಯಜೀವಿ ವಿಭಾಗದ ವಿವಿಧ ಅರಣ್ಯಗಳ ವ್ಯಾಪ್ತಿಗೆ ಬರುವ ಈ ಕೆಳಕಂಡ ಪ್ರವಾಸಿಗರ ಪ್ರೇಕ್ಷಣೀಯ ಸ್ಥಳಗಳಿಗೆ ಬರುವ ವಾಹನಗಳಿಂದ ವಾಹನ ನಿಲುಗಡೆ ಶುಲ್ಕ ವಸೂಲು ಮಾಡಲು ಈ ಮೂಲಕ ಹರಾಜನ್ನು ಕರೆಯಲಾಗಿದೆ. ಈ ವನ್ಯಧಾಮಕ್ಕೆ ಸದರಿ ಸಾಲಿಗೆ ಸರ್ಕಾರಿ ಆದೇಶ ಸಂಖ್ಯೆ: FEE.258.FWL.98 (part) ದಿನಾಂಕ:03.01.2001ರ ಪ್ರಕಾರ ಪ್ರತಿದಿನವೊಂದಕ್ಕೆ ವಾಹನವೊಂದಕ್ಕೆ ವಾಹನ ನಿಲುಗಡೆ ಶುಲ್ಕ ಜೀಪು ಅಥವಾ ಕಾರುಗಳಿಗೆ ರೂ. 20/- ಹಾಗೂ ಇತರೆ ಲಘು ವಾಹನಗಳಿಗೆ ರೂ.30/- ಮತ್ತು ಬಸ್ಸು ಮತ್ತು ಟ್ರಕ್‌ಗಳಿಗೆ ರೂ.40/- ವಸೂಲಾತಿ ಮಾಡಬೇಕಾಗಿರುವುದರಿಂದ, ಕೆಳಕಂಡ ಅರಣ್ಯ ವನ್ಯಧಾಮದ ಪ್ರದೇಶಗಳಲ್ಲಿ ವಾಹನ ನಿಲುಗಡೆ ಶುಲ್ಕ ದಿನಾಂಕ: 01.04.2006 ರಿಂದ 31.03.2007 ರವರೆಗೆ ವಸೂಲು ಮಾಡಲು ಉದ್ದೇಶಿಸಿರುವ ಸ್ಥಳಗಳನ್ನು ಈ ಮುಂದೆ ನಮೂದಿಸಿರುವ ದಿನಾಂಕಗಳಂದು ಬಹಿರಂಗ ಹರಾಜನ್ನು ಕೈಗೊಳ್ಳಲಾಗುತ್ತದೆ. ಸದರಿ ಕೆಲಸ ನಿರ್ವಹಿಸಲು ಇಚ್ಛೆಯುಳ್ಳವರು ಹರಾಜಿನಲ್ಲಿ ಭಾಗವಹಿಸಬಹುದೆಂದು ಸಾರ್ವಜನಿಕರಿಗೆ ಈ ಮೂಲಕ ತಿಳುವಳಿಕೆ ನೀಡಲಾಗಿದೆ.

| ಕ್ರ. ಸಂ. | ವಲಯ | ವನ್ಯಧಾಮಕ್ಕೆ ಪ್ರವೇಶಿಸುವ ವಾಹನಗಳಿಂದ ವಾಹನ ನಿಲುಗಡೆ ಶುಲ್ಕ ಸಂಗ್ರಹಿಸಲಾಗುವ ಸ್ಥಳ | | ಹರಾಜು ನಡೆಯುವ ಸ್ಥಳ ಮತ್ತು ದಿನಾಂಕ |
|---|---|---|---|---|
| 1. | ಕನಕಪುರ ವನ್ಯಜೀವಿ ವಲಯ. | 1. | ಬಸವನಬೆಟ್ಟ ಕಾಯ್ದಿಟ್ಟ ಅರಣ್ಯ ಪ್ರದೇಶ ಮತ್ತು ಚೀಲಂದವಾಡಿ ಕಾಯ್ದಿಟ್ಟ ಅರಣ್ಯ ಪ್ರದೇಶ (ಬ್ಯಾಡರಹಳ್ಳಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಗೆ ಬರುವ ಪ್ರದೇಶಗಳನ್ನು ಹೊರತುಪಡಿಸಿ) | ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಕನಕಪುರ ದಿನಾಂಕ: 27.03.2006ರ ಮಧ್ಯಾಹ್ನ 3.00 ಗಂಟೆಗೆ |
| | | 2. | ಮುಗ್ಗೂರು ಅರಣ್ಯ ಪ್ರದೇಶ (ಉಯ್ಯಂಬಹಳ್ಳಿ ಗ್ರಾಮ ಪಂಚಾಯಿತಿ ವ್ಯಾಪ್ತಿಗೆ ಬರುವ ಪ್ರದೇಶವನ್ನು ಹೊರತುಪಡಿಸಿ) | |
| 2. | ಮಲೈ ಮಹದೇಶ್ವರ ಬೆಟ್ಟ ವನ್ಯಜೀವಿ ವಲಯ | 3. | ಗೋಪಿನಾಥಂನಿಂದ ಹೊಗೇನಕಲ್ ಫಾಲ್ಸ್‌ವರೆಗೆ ಮಾರಿಕೊಟ್ಟಾಯಿ ವನ್ಯಧಾಮದ ಗಡಿ ಪ್ರದೇಶದವರೆಗೆ. | ವಲಯ ಅರಣ್ಯಾಧಿಕಾರಿಗಳ ಕಛೇರಿ ಆವರಣ ಮಲೈ ಮಹದೇಶ್ವರ ಬೆಟ್ಟ ವನ್ಯಜೀವಿ ವಲಯ, ದಿನಾಂಕ: 23.03.2006 ಮಧ್ಯಾಹ್ನ 4.00 ಗಂಟೆಗೆ. |

ಈ ಹರಾಜನ್ನು ವಿವಿಧ ಕಾರಣಗಳಿಂದ ಅಂಗೀಕರಿಸಲು ಆಡಳಿತಾತ್ಮಕ ತೊಡಕುಗಳು ಬಂದಲ್ಲಿ ದಿನಾಂಕ: 31.03.2006ರಂದು ಮಧ್ಯಾಹ್ನ 3.00 ಗಂಟೆಗೆ ಅದೇ ಮೇಲ್ಕಾಣಿಸಿದ ಕಛೇರಿಗಳಲ್ಲಿ ಮತ್ತೆ ಮರು ಹರಾಜನ್ನು ಮಾಡಲಾಗುತ್ತದೆ.

**ನಿಬಂಧನೆಗಳು:**

1. ಹರಾಜಿನಲ್ಲಿ ತಿಳಿಸಿರುವ ಪ್ರವೇಶ ಶುಲ್ಕ ಸಂಗ್ರಹಿಸಲಾಗುವ ಪ್ರತಿ ಸ್ಥಳಗಳಿಗೆ ಪ್ರತ್ಯೇಕವಾಗಿ ವಾಹನ ನಿಲುಗಡೆ ಶುಲ್ಕ ವಸೂಲಾತಿಗಾಗಿ ಹರಾಜು ಮಾಡಲಾಗುತ್ತದೆ.

2. ಹರಾಜಿನಲ್ಲಿ ಭಾಗವಹಿಸುವವರು ರೂ.5000.00 ಠೇವಣಿ ಪಾವತಿಸಿ, ಹರಾಜಿನಲ್ಲಿ ಭಾಗವಹಿಸಬಹುದಾಗಿದೆ.

3. ಯಶಸ್ವಿ ಬಿಡ್ಡುದಾರರು ಅವರವರ ಹೆಸರಿಗೆ ಆಗಿರುವ ವನ್ಯಧಾಮದ ಪ್ರವೇಶ ಶುಲ್ಕ ಸಂಗ್ರಹದ ಬಾಬ್ತಿನ ಪೂರ್ಣ ಹಣವನ್ನು ಆ ದಿನವೇ ಪಾವತಿಸತಕ್ಕದ್ದು ತಪ್ಪಿದ್ದಲ್ಲಿ ಯಶಸ್ವಿ ಬಿಡ್ಡುದಾರರ ಮುಂಗಡ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಹರಾಜನ್ನು ರದ್ದುಪಡಿಸಲಾಗುವುದು.

4. ಯಶಸ್ವಿ ಬಿಡ್ಡುದಾರರು ಈ ಕಛೇರಿಯಿಂದ ಕಾರ್ಯಾದೇಶ ದೊರೆತ ಕೂಡಲೇ ರೂ.200 ಛಾಪಾಕಾಗದದಲ್ಲಿ ಕೆಳಸಹಿದಾರರೊಡನೆ ಕರಾರು ಒಪ್ಪಂದ ಮಾಡಿಕೊಳ್ಳತಕ್ಕದ್ದು.

5. ಯಶಸ್ವಿ ಬಿಡ್ಡುದಾರರು ಅವರು ಕೆಲಸ ನಿರ್ವಹಿಸಲಿರುವ ನಿಗದಿಪಡಿಸಿದ ಸ್ಥಳಗಳಲ್ಲಿ ಸಾರ್ವಜನಿಕರಿಂದ ಸಂಗ್ರಹಿಸಲಿರುವ ದರಗಳು ಹಾಗೂ ನಿಯಮಗಳ ಬಗ್ಗೆ ನಾಮಫಲಕಗಳನ್ನು ಹಾಕಿ ಕೆಲಸ ನಿರ್ವಹಿಸುವುದು.

6. ಯಶಸ್ವಿ ಬಿಡ್ಡುದಾರರು ವನ್ಯಧಾಮದ ವ್ಯಾಪ್ತಿಯಲ್ಲಿ ಬರುವ ಪ್ರದೇಶಗಳಿಂದ ಮಾತ್ರ ಸರ್ಕಾರಿ ಆದೇಶದಂತೆ ವಾಹನ ನಿಲುಗಡೆ ಶುಲ್ಕ ಪ್ರವಾಸಿಗರಿಂದ ವಸೂಲಿ ಮಾಡತಕ್ಕದ್ದು ಹಾಗೂ ವನ್ಯಧಾಮದ ಹೊರವಲಯದಿಂದ ವಾಹನ ನಿಲುಗಡೆ ಶುಲ್ಕ ಇತ್ಯಾದಿ ವಸೂಲಾತಿ ಬಗ್ಗೆ ತಂಟೆ ತಕರಾರುಗಳು ಬಂದಲ್ಲಿ ಈ ಕಛೇರಿಯು ಜವಾಬ್ದಾರರಲ್ಲ.

7. ಯಶಸ್ವಿ ಬಿಡ್ಡುದಾರರು ವನ್ಯಧಾಮದ ಹಿತದೃಷ್ಟಿಯಿಂದ ಅಕ್ರಮ ಚಟುವಟಿಕೆಗಳನ್ನು ತಡೆಯಲು ಇಲಾಖೆಯೊಂದಿಗೆ ಸಹಕರಿಸತಕ್ಕದ್ದು.

8. ಯಶಸ್ವಿ ಬಿಡ್ಡುದಾರರು ಅಕ್ರಮ ಚಟುವಟಿಕೆದಾರರೊಡನೆ ಶಾಮೀಲಾಗಿರುವುದು ಕಂಡು ಬಂದಲ್ಲಿ ಗುತ್ತಿಗೆಯನ್ನು ರದ್ದುಗೊಳಿಸುವುದಲ್ಲದೇ ಕಾನೂನಿನಂತೆ ಕ್ರಮ ಜರುಗಿಸಲಾಗುವುದು.

9. ಈ ಹಾರಜಿನಲ್ಲಿ ಯಾವುದೇ ವಿಧವಾದ ತಂಟೆ ತಕರಾರುಗಳು ಬಂದಲ್ಲಿ ಅರಣ್ಯ ಸಂರಕ್ಷಣಾಧಿಕಾರಿಗಳು, ಚಾಮರಾಜನಗರ ವೃತ್ತ, ಚಾಮರಾಜನಗರ ಇವರ ತೀರ್ಪು ಅಂತಿಮವಾಗಿರುತ್ತದೆ. ಇದಕ್ಕೆ ಬಿಡ್ಡುದಾರರು ಬದ್ಧರಾಗಿರಬೇಕು.

10. ವಾಹನಗಳಿಗೆ ವನ್ಯಧಾಮದ ಪ್ರವೇಶ ವೇಳೆಯನ್ನು ಬೆಳಿಗ್ಗೆ 6.00 ರಿಂದ ಸಂಜೆ 6.00 ರವರೆಗೆ ಮಾತ್ರ ನಿಗದಿಗೊಳಿಸಲಾಗಿದೆ.

11. ಯಶಸ್ವಿ ಗುತ್ತಿಗೆದಾರರು ನೇಮಿಸಿದ ಕೆಲಸದವರಿಗೆ ವನ್ಯಪ್ರಾಣಿಗಳಿಂದ ಅಪಘಾತಗಳು ಸಂಭವಿಸಿದಲ್ಲಿ ಅರಣ್ಯ ಇಲಾಖೆಯಿಂದ ಯಾವುದೇ ಪರಿಹಾರಕ್ಕೆ ಅರ್ಹರಾಗಿರುವುದಿಲ್ಲ.

12. ಯಾವುದೇ ಕಾರಣವಿಲ್ಲದೆ ಹರಾಜನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಕೆಳಸಹಿದಾರರಲ್ಲಿ ಕಾಯ್ದಿರಿಸಲಾಗಿದೆ.

13. ಯಶಸ್ವಿ ಬಿಡ್ಡುದಾರರು ವನ್ಯಧಾಮದಲ್ಲಿ ಪರಿಸರ ಮಾಲಿನ್ಯ ತಡೆಯಲು ಹೆಚ್ಚಿನ ನಿಗಾ ವಹಿಸುವುದು.

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಕಾವೇರಿ ವನ್ಯಜೀವಿ ವಿಭಾಗ, ಕನಕಪುರ.

ಪಿ.ಆರ್. 146

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ಕಛೇರಿ, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ

## ಹರಾಜು ಇಸ್ತಿಹಾರ್ ಪ್ರಕಟಣೆ

## ಸಂ.ಎ4/ ಹರಗಲು/ ಸಿಆರ್-82/ 2005-06, ದಿನಾಂಕ:28ನೇ ಫೆಬ್ರವರಿ, 2006

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ, ಕಾವೇರಿ ವನ್ಯಜೀವಿ ವಿಭಾಗದ ಕನಕಪುರ ವನ್ಯಜೀವಿ ವಲಯ, ಹನೂರು ವನ್ಯಜೀವಿ ವಲಯ, ಕೌದಳ್ಳಿ ವನ್ಯಜೀವಿ ವಲಯ ಹಾಗೂ ಮಲೈ ಮಹದೇಶ್ವರ ಬೆಟ್ಟ ವನ್ಯಜೀವಿ ವಲಯಗಳ ವ್ಯಾಪ್ತಿಯಲ್ಲಿ ಬರುವ ಕಾವೇರಿ ನದಿಯಲ್ಲಿ ಈ ಕೆಳಗೆ ತಿಳಿಸಿರುವ ಕಡೆಗಳಲ್ಲಿ ಪ್ರವಾಸಿಗರನ್ನು/ ಪ್ರಯಾಣಿಕರನ್ನು ಒಂದು ತೀರದಿಂದ ಮತ್ತೊಂದು ತೀರಕ್ಕೆ ಮತ್ತು ಹಿಂದಕ್ಕೆ ಕರೆತರುವ ಕೆಲಸಕ್ಕೆ ನಿಗದಿಪಡಿಸಿದ ದರದಂತೆ ಅವರಿಂದ ಶುಲ್ಕ ವಸೂಲಿ ಮಾಡುವ ಕೆಲಸಕ್ಕೆ 2006-07ನೇ (01.04.2006 ರಿಂದ 31.03.2007ರವರೆಗೆ) ಸಾಲಿಗೆ ಹರಾಜು ಮಾಡಲು ಕೆಳಕಂಡಂತೆ ಸ್ಥಳ ದಿನಾಂಕ ಮತ್ತು ಸಮಯವನ್ನು ನಿಗದಿಗೊಳಿಸಲಾಗಿದೆ. ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಸಾರ್ವಜನಿಕರು ಹರಾಜಿನಲ್ಲಿ ಭಾಗವಹಿಸಬಹುದಾಗಿದೆ.

| ಕ್ರ. ಸಂ. | ವಲಯ | ಕಡದ ಹೆಸರು | | ಹರಾಜಿನ ದಿನಾಂಕ ಮತ್ತು ಸಮಯ | ಹರಾಜು ನಡೆಯುವ ಸ್ಥಳ |
|---|---|---|---|---|---|
| 1. | ಕನಕಪುರ ವನ್ಯಜೀವಿ ವಲಯ | 1. | ಮುತ್ತತ್ತಿ ಕಡ (ಮುತ್ತತ್ತಿ ಕಡೆಯಿಂದ ಚಿಕ್ಕಲ್ಲೂರು ಅರಣ್ಯ ಕಡೆಗೆ) | 21.03.2006 ಮಧ್ಯಾಹ್ನ 3.00 | ಮುತ್ತತ್ತಿ ಸಸ್ಯಕ್ಷೇತ್ರ ಮುತ್ತತ್ತಿ. |
| 2. | ಹನೂರು ವನ್ಯಜೀವಿ ವಲಯ | 1.<br>2. | ಮುತ್ತತ್ತಿ ಕಡ (ಚಿಕ್ಕಲ್ಲೂರು ಅರಣ್ಯ ಕಡೆಯಿಂದ ಚೀಲಂದವಾಡಿ ಅರಣ್ಯದ ಕಡೆಗೆ)<br>ಬಸವನಕಡ | 21.03.2006 ಮಧ್ಯಾಹ್ನ 3.30<br>21.03.2006 ಮಧ್ಯಾಹ್ನ 3.45 | ಮುತ್ತತ್ತಿ ಸಸ್ಯಕ್ಷೇತ್ರ ಮುತ್ತತ್ತಿ. |
| 3. | ಕೌದಳ್ಳಿ ವನ್ಯಜೀವಿ ವಲಯ | 1.<br>2. | ಉಗನಿಯ ಕಡ<br>ದಬ್ಬಗುಳಿ ಕಡ | 22.03.2006 ಬೆಳಿಗ್ಗೆ 11.00<br>22.03.2006 ಬೆಳಿಗ್ಗೆ11.30 | ಕೌದಳ್ಳಿ ವನ್ಯಜೀವಿ ವಲಯ ಕಛೇರಿ, ಕೌದಳ್ಳಿ. |
| 4. | ಮಲೈ ಮಹದೇಶ್ವರ ಬೆಟ್ಟ ವನ್ಯಜೀವಿ ವಲಯ | 1.<br>2. | ಹೊಗೇನಕಲ್ ಕಡ<br>ಆಲಂಬಾಡಿ ಕಡ | 23.03.2006 ಬೆಳಿಗ್ಗೆ 11.00<br>23.03.2006 ಬೆಳಿಗ್ಗೆ 11.30 | ಮಲೈ ಮಹದೇಶ್ವರ ಬೆಟ್ಟ ವನ್ಯಜೀವಿ ವಲಯ ಕಛೇರಿ. |

**ನಿಬಂಧನೆಗಳು:**

1. ಹರಗಲು ಹರಾಜಿನಲ್ಲಿ ಭಾಗವಹಿಸುವವರು ಹರಾಜು ಪ್ರಾರಂಭವಾಗುವುದಕ್ಕೆ ಮುನ್ನ ರೂ.2000/- (ಎರಡು ಸಾವಿರ) ರೂಗಳನ್ನು ಠೇವಣಿಯಾಗಿ ಪಾವತಿಸಿ ರಶೀದಿ ಪಡೆಯತಕ್ಕದ್ದು.

2. ಹರಾಜಿನಲ್ಲಿ ಭಾಗವಹಿಸಿ ಯಶಸ್ವಿಯಾದ ಬಿಡ್ಡುದಾರರು ತಮ್ಮ ಹೆಸರಿಗೆ ಹರಾಜು ನಿಂತ ಕೂಡಲೇ ಸ್ಥಳದಲ್ಲಿಯೇ ಹರಾಜಿನ ಪೂರ್ಣ ಮೊತ್ತವನ್ನು ಪಾವತಿಸಿ ರಶೀದಿ ಪಡೆಯುವುದು.

3. ಹರಾಜು ಮಂಜೂರಾತಿ ಪಡೆಯದ ಹೊರತು ಯಶಸ್ವಿ ಬಿಡ್ಡುದಾರರು ಹರಗಲು ನಡೆಸಬಾರದು ಹಾಗೂ ಪ್ರಯಾಣದ ದರವನ್ನು ವಸೂಲು ಮಾಡಬಾರದು.

4. ಹರಾಜಿನ ಹಕ್ಕು ಪಡೆದವರು ಹರಗಲಿನಲ್ಲಿ ಪ್ರಯಾಣ ಮಾಡುವ ಪ್ರತಿ ಪ್ರಯಾಣಿಕರಿಂದ ರೂ.10.00/- (ಹತ್ತು) ರೂಗಳನ್ನು ಮಾತ್ರ ವಸೂಲಿ ಮಾಡುವುದು.

5. ಹರಾಜನ್ನು ಈ ಕಛೇರಿಯಿಂದ ದೃಢೀಕರಿಸಿಕೊಂಡು ಮಂಜೂರಾತಿ ಪಡೆದ ನಂತರ ಕಛೇರಿಯಲ್ಲಿ ಕರಾರು ಒಪ್ಪಂದ ಮಾಡಿಕೊಂಡ ಕಾರ್ಯಾದೇಶ ಪಡೆದು ಮುಂದುವರೆಯುವುದು.

6. ಹರಗಲು ನಡೆಸುವ ಸಂದರ್ಭದಲ್ಲಿ ಸೂಕ್ತ ರಕ್ಷಣೆಯನ್ನು ಪ್ರಯಾಣಿಕರಿಗೆ ಒದಗಿಸುವುದು. ಆಕಸ್ಮಿಕವಾಗಿ ಸಂಭವಿಸಬಹುದಾದ ಅನಾಹುತಗಳಿಗೆ ಗುತ್ತಿಗೆದಾರರೇ ಜವಾಬ್ದಾರರಾಗಿರುತ್ತಾರೆ. ಇಲಾಖೆಯು ಯಾವುದೇ ಕಾರಣದಿಂದ ಜವಾಬ್ದಾರರಾಗುವುದಿಲ್ಲ.

7. ಪ್ರಯಾಣಿಕರು ನದಿಯಲ್ಲಿ ಅಥವಾ ನದಿ ದಂಡೆಯಲ್ಲಿ ಮತ್ತು ವನ್ಯಧಾಮದಲ್ಲಿ ಯಾವುದೇ ಪ್ಲಾಸ್ಟಿಕ್ ವಸ್ತುಗಳನ್ನು ಹಾಗೂ ಬಾಟಲಿಗಳನ್ನು ಬಿಸಾಡುವುದು, ಪರಿಸರ ಮಾಲಿನ್ಯ ಮಾಡುವುದನ್ನು ಕಡ್ಡಾಯವಾಗಿ ನಿಷೇದಿಸಲಾಗಿದೆ. ಈ ಬಗ್ಗೆ ಪ್ರಯಾಣಿಕರಿಗೆ ಗುತ್ತಿಗೆದಾರರು ತಿಳುವಳಿಕೆ ನೀಡಿ ಪರಿಸರ ರಕ್ಷಣೆಯಲ್ಲಿ ಹೆಚ್ಚಿನ ತಿಳುವಳಿಕೆ ನೀಡುವುದು.

8. ಅರಣ್ಯದಲ್ಲಿ ಗುತ್ತಿಗೆದಾರರು ಯಾವುದೇ ಕಾನೂನು ಬಾಹಿರವಾದ ಕೃತ್ಯ ಹಾಗೂ ಚಟುವಟಿಕೆಗಳಲ್ಲಿ ಭಾಗಿಯಾದಲ್ಲಿ ಯಾವುದೇ ಮುನ್ಸೂಚನೆ ನೀಡದೆ ಗುತ್ತಿಗೆಯನ್ನು ರದ್ದುಪಡಿಸಲಾಗುವುದು.

9. ಹರಗಲಿನಲ್ಲಿ ದ್ವಿಚಕ್ರ ಹಾಗೂ ಇತರೇ ವಾಹನಗಳನ್ನು ಮತ್ತು ಬೆಂಕಿ ಅಂಟಿಸುವ ಅಥವಾ ಸ್ಫೋಟಕ ವಸ್ತುಗಳನ್ನು ಸಾಗಿಸಬಾರದು. ಈ ಬಗ್ಗೆ ಇಲಾಖೆಯ ಗಮನಕ್ಕೆ ಬಂದಲ್ಲಿ ಗುತ್ತಿಗೆದಾರರ ಗುತ್ತಿಗೆಯನ್ನು ಯಾವ ಮುನ್ಸೂಚನೆಯನ್ನು ನೀಡದೇ ಗುತ್ತಿಗೆಯನ್ನು ರದ್ದುಪಡಿಸಲಾಗುವುದು.

10. ಪ್ರಯಾಣಿಕರನ್ನು ಬೆಳಿಗ್ಗೆ 6.00 ಗಂಟೆಯಿಂದ ಸಂಜೆ 6:00 ಗಂಟೆಯವರೆಗೆ ಮಾತ್ರ ಸಾಗಿಸಲು ಅನುಮತಿಸಲಾಗುವುದು.

11. ಅರಣ್ಯ ಅಪರಾಧ ತಡೆಯಲು ಮತ್ತು ಅರಣ್ಯ ಬೆಂಕಿ ತಡೆಯಲು ಇಲಾಖೆಗೆ ಸಹಕರಿಸತಕ್ಕದ್ದು.

12. ಹರಾಜನ್ನು ಕಾರಣ ನೀಡದೆ ಒಪ್ಪುವ/ ಅಥವಾ ತಿರಸ್ಕರಿಸುವ ಹಕ್ಕನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ ಇವರಿಗೆ ಕಾಯ್ದಿರಿಸಲಾಗಿದೆ.

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಕಾವೇರಿ ವನ್ಯಜೀವಿ ವಿಭಾಗ, ಕನಕಪುರ.

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ಕಛೇರಿ, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ

## ಹರಾಜು ಇಸ್ತಿಹಾರ್ ಪ್ರಕಟಣೆ

### ಸಂ.ಎ4/ ಹರಗಲು/ ಹರಾಜು/ ಸಿಆರ್-82/ 2005-06, ದಿನಾಂಕ:28ನೇ ಫೆಬ್ರವರಿ, 2006

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ ಕಾವೇರಿ ವನ್ಯಜೀವಿ ವಿಭಾಗದ ಮಲೈ ಮಹದೇಶ್ವರ ಬೆಟ್ಟ ವನ್ಯಜೀವಿ ವಲಯದ ವ್ಯಾಪ್ತಿಯಲ್ಲಿ ಬರುವ ಕಾವೇರಿ ನದಿಯ ಹೊಗೇನಕಲ್ ಜಲಪಾತದ ಬಳಿ ಕಾವೇರಿ ನದಿ ತೀರದಲ್ಲಿ ಪ್ರವಾಸಿಗರ ಇಂಜಿನ್ ಬೋಟ್ ಸೇವೆ ಉಪಯೋಗಿಸಲು 2006-07 (01.04.2006 ರಿಂದ 31.03.2007ರವರೆಗೆ) ನೇ ಸಾಲಿಗೆ ದಿನಾಂಕ: 23.03.2006 ರಂದು ಹರಾಜು ಮಾಡಲಾಗುವುದು, ಇದರ ಸಂಬಂಧ ಇಲಾಖೆಯ ವತಿಯಿಂದ ಸದರಿ ಯಾಂತ್ರಿಕ ದೋಣಿಯಲ್ಲಿ ಪ್ರಯಾಣಿಕರನ್ನು ಸಾಗಾಣಿಕೆ ಮಾಡಲು ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಇಲಾಖೆಯ ಯಾಂತ್ರಿಕ ದೋಣಿಯೊಂದನ್ನು ನೀಡಲಾಗುವುದು. ಈ ಸಂಬಂಧ ಸದರಿ ದಿನಾಂಕದಂದು ಸಾರ್ವಜನಿಕರು ಹರಾಜಿನಲ್ಲಿ ಭಾಗವಹಿಸಬಹುದಾಗಿದೆ.

**ನಿಬಂಧನೆಗಳು:**

1. ಮುಂಗಡ ಭದ್ರತಾ ಠೇವಣಿಯಾಗಿ 25,000 ರೂ.ಗಳ ಮೊತ್ತವನ್ನು ಇಲಾಖೆಗೆ ಪಾವತಿಸಿ ರಶೀದಿ ಪಡೆಯತಕ್ಕದ್ದು. ಈ ಹಣವನ್ನು ಗುತ್ತಿಗೆಯ ಅವಧಿಯು ಮುಗಿದ ನಂತರ ಹಿಂದುರಿಗಿಸಲಾಗುವುದು.

2. ಇಲಾಖೆಯ ಇಂಜಿನ್ ಬೋಟನ್ನು ಅವಧಿ ಮುಗಿದ ನಂತರ ಮೊದಲಿನಂತೆ ಸುಸ್ಥಿತಿಯಲ್ಲಿ ಇಲಾಖೆಯ ವಶಕ್ಕೆ ಒಪ್ಪಿಸುವುದು.

3. ಹರಾಜಿನ ಗುತ್ತಿಗೆ ಅವಧಿಯು 01.04.2006 ರಿಂದ 31.03.2007 ರವರೆಗೆ ಮಾತ್ರ ಜಾರಿಯಲ್ಲಿರುತ್ತದೆ.

4. ಇಲಾಖೆ ಇಂಜಿನ್ ಬೋಟನ್ನು ನಡೆಸಲು ನುರಿತ ಚಾಲಕ ಸಿಬ್ಬಂದಿಯನ್ನು ಬಿಡ್ಡುದಾರರು ಸ್ವಂತ ಖರ್ಚಿನಲ್ಲಿ ನೇಮಿಸಿಕೊಂಡು ಇಂಜಿನ್ ಬೋಟಿಗೆ ಬೇಕಾದ ಇಂಧನವನ್ನು ಸ್ವತಃ ಬಿಡ್‌ದಾರರೇ ಖರೀದಿ ಮಾಡಿಕೊಳ್ಳುವುದು, ಇಲಾಖೆಯ ವತಿಯಿಂದ ದುರಸ್ತಿಗಾಗಲೀ ಅಥವಾ ಇಂಧನ ವೆಚ್ಚಕ್ಕಾಗಲೀ ಹಣವನ್ನು ನೀಡುವುದಿಲ್ಲ.

5. ಇಲಾಖೆಯ ಇಂಜಿನ್ ಬೋಟಿನಲ್ಲಿ 10 ಜನರಿಗಿಂತ ಹೆಚ್ಚಿಗೆ ಪ್ರಯಾಣಿಕರನ್ನು ಸಾಗಾಣಿಕೆ ಮಾಡಬಾರದು.

6. ಇಂಜಿನ್ ಬೋಟಿನಲ್ಲಿ ಪ್ರಯಾಣ ಮಾಡುವ ಪ್ರಯಾಣಿಕರಿಂದ ಒಬ್ಬರಿಂದ 10 ರೂ.ಗಳಿಗೆ ನಿಗದಿಪಡಿಸಲಾಗಿದೆ.

7. ಇಲಾಖೆ ಇಂಜಿನ್ ಬೋಟು ಆಕಸ್ಮಿಕವಾಗಿ ಅಪಘಾತಕ್ಕೆ ಈಡಾದಲ್ಲಿ ಗುತ್ತಿಗೆದಾರರೇ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ. ಇಲಾಖೆಯು ಜವಾಬ್ದಾರಿಯಾಗುವುದಿಲ್ಲ.

8. ಹರಾಜು ಗುತ್ತಿಗೆ ವ್ಯವಹಾರದಲ್ಲಿ ಅಕ್ರಮ ಕಂಡುಬಂದಲ್ಲಿ ಗುತ್ತಿಗೆದಾರರ ಹಕ್ಕನ್ನು ಯಾವುದೇ ಮುನ್ಸೂಚನೆ ನೀಡದೆ ರದ್ದುಪಡಿಸಲಾಗುವುದು.

9. ಮಲೈ ಮಹದೇಶ್ವರ ಬೆಟ್ಟ ವನ್ಯಜೀವಿ ವಲಯ ಅರಣ್ಯ ಪ್ರದೇಶದಲ್ಲಿ ಅರಣ್ಯ ಭೂಮಿ ಒತ್ತುವರಿ ಹಾಗೂ ಯಾವುದೇ ಶೆಡ್ಡುಗಳನ್ನು ನಿರ್ಮಾಣ ಮಾಡಲು ಅವಕಾಶವಿರುವುದಿಲ್ಲ.

10. ಅರಣ್ಯ ಪರಿಸರವನ್ನು ಕಾಪಾಡುವಲ್ಲಿ ಎಚ್ಚರವಹಿಸಿ ಅರಣ್ಯದಲ್ಲಿ ಹಾಗೂ ಕಾವೇರಿ ನದಿಯಲ್ಲಿ ಪ್ಲಾಸ್ಟಿಕ್ ಬಾಟಲ್ ಮತ್ತು ಚೀಲಗಳನ್ನು ಬಿಸಾಡಿ ಮಾಲಿನ್ಯ ಮಾಡದಿರುವಂತೆ ಎಚ್ಚರಿಕೆ ವಹಿಸುವುದು.

11. ಗುತ್ತಿಗೆಯ ಯಶಸ್ವಿ ಬಿಡ್ಡುದಾರರು ಬೇರೆಯವರಿಗೆ ಪರಭಾರೆ ಮಾಡಲು ಹಕ್ಕು ಇರುವುದಿಲ್ಲ ಅಂತಹ ಪ್ರಕರಣ ಕಂಡುಬಂದಲ್ಲಿ ಗುತ್ತಿಗೆಯನ್ನು ರದ್ದುಪಡಿಸುವುದಲ್ಲದೆ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

12. ಪ್ರಯಾಣಿಕರನ್ನು ಬೆಳಿಗ್ಗೆ 6 ಗಂಟೆ ನಂತರ ಹಾಗೂ ಸಂಜೆ 6 ಗಂಟೆ ಒಳಗಾಗಿ ಮಾತ್ರ ಕರೆದೊಯ್ಯುವುದು.

13. ಅರಣ್ಯ ಇಲಾಖೆ ಅಧಿಕಾರಿಗಳು ಸರ್ಕಾರಿ ಕೆಲಸದ ಮೇಲೆ ಬಂದ ಸಮಯದಲ್ಲಿ ಇಲಾಖೆ ಇಂಜಿನ್ ಬೋಟ್‌ನ ಸೇವೆಯನ್ನು ಉಪಯೋಗಿಸಿಕೊಳ್ಳಲು ಕಾಯ್ದಿರಿಸತಕ್ಕದ್ದು.

14. ಗುತ್ತಿಗೆದಾರರು ಯಾವುದೇ ರೀತಿಯ ಕಾನೂನು ಬಾಹಿರ ಚಟುವಟಿಕೆಯಲ್ಲಿ ಭಾಗಿಯಾದಲ್ಲಿ ಅಂತಹ ಗುತ್ತಿಗೆದಾರರ ಗುತ್ತಿಗೆಯನ್ನು ರದ್ದುಪಡಿಸಲಾಗುವುದು.

15. ಹರಾಜಿನಲ್ಲಿ ಭಾಗವಹಿಸಿದ ಯಶಸ್ವಿ ಬಿಡ್ಡುದಾರರು ಹರಾಜಿನ ಪೂರ್ಣ ಮೊತ್ತವನ್ನು ಹರಾಜಿನ ದಿವಸವೇ ಸಂದಾಯ ಮಾಡಿ ರಶೀದಿ ಪಡೆಯತಕ್ಕದ್ದು.

16. ಬೋಟನ್ನು ನಡೆಸಲು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಅಥವಾ ಅರಣ್ಯ ಸಂರಕ್ಷಣಾಧಿಕಾರಿಗಳು ಚಾಮರಾಜನಗರ ವೃತ್ತ ಇವರಿಂದ ಹರಾಜಿನ ಪ್ರಕ್ರಿಯೆಯು ಮಂಜೂರಾತಿಯಾದ ನಂತರ ನದಿಯಲ್ಲಿ ಬೋಟನ್ನು ನಡೆಸಲು ಅನುಮತಿ ನೀಡಲಾಗುವುದು.

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಕಾವೇರಿ ವನ್ಯಜೀವಿ ವಿಭಾಗ, ಕನಕಪುರ.

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ಕಛೇರಿ, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ

## ಹರಾಜು ಇಸ್ತಿಹಾರ್ ಪ್ರಕಟಣೆ

## ಸಂ.ಎ4/ ಕಾವಜಿ/ ಸಿಆರ್-82/ 2005-06, ದಿನಾಂಕ:28ನೇ ಫೆಬ್ರವರಿ, 2006

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ, ಕಾವೇರಿ ವನ್ಯಜೀವಿ ವಿಭಾಗದ ಕನಕಪುರ ವನ್ಯಜೀವಿ ವಲಯದ ವ್ಯಾಪ್ತಿಯಲ್ಲಿ ಬರುವ ಕಾವೇರಿನದಿ ಮತ್ತು ಅರ್ಕಾವತಿ ನದಿ ಕೂಡುವ ಪ್ರದೇಶದಲ್ಲಿ ಮುಗ್ಗೂರು ರಾಜ್ಯ ಅರಣ್ಯ ಪ್ರದೇಶದ ಸಂಗಮದಿಂದ ಮೇಕೆದಾಟುವರೆಗೆ ಪ್ರವಾಸಿಗರನ್ನು ಖಾಸಗಿ ವಾಹನದ ಮೂಲಕ ಸಾಗಾಣಿಕೆ ಮಾಡಿ ಹಿಂದಿರುಗಿ ಕರೆತರುವ ಕೆಲಸಕ್ಕೆ ದಿನಾಂಕ: 25.04.2006ರಂದು ಬೆಳಿಗ್ಗೆ 12.00 ಗಂಟೆಗೆ ದಿನಾಂಕವನ್ನು ನಿಗದಿಗೊಳಿಸಲಾಗಿದೆ. ಇಷ್ಟವುಳ್ಳವರು ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಕೆಳಕಂಡ ಕಛೇರಿಯಲ್ಲಿ ಹರಾಜಿನಲ್ಲಿ ಭಾಗವಹಿಸಲು ತಿಳಿಸಲಾಗಿದೆ ಹಾಗೂ ಯಶಸ್ವಿ ಬಿಡ್ಡುದಾರರು ವಾಹನವನ್ನು ದಿನಾಂಕ:01.04.2006 ರಿಂದ 31.03.2007ರವರೆಗೆ ಮಾತ್ರ ಸಂಗಮದಿಂದ ಮೇಕೆದಾಟುವರೆಗೆ ವಾಹನದಲ್ಲಿ ಜನರನ್ನು ಸಾಗಾಣಿಕೆ ಮಾಡಿ ಕರೆತರಲು ಅರ್ಹರಾಗಿರುತ್ತಾರೆ.

### ಹರಾಜಿನ ವಿವರಗಳು

| ಕ್ರ. ಸಂ. | ಹರಾಜು ನಡೆಯುವ ಸ್ಥಳ | ವಾಹನ ಸಂಚರಿಸಬೇಕಾದ ಸ್ಥಳಗಳು | ಹರಾಜಿನ ದಿನಾಂಕ | ಹರಾಜಿನಲ್ಲಿ ಭಾಗವಹಿಸುವವರು ಪಾವತಿಸಬೇಕಾದ ಠೇವಣಿ ಹಣ |
|---|---|---|---|---|
| 1. | ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ. | ಸಂಗಮದಿಂದ ಮೇಕೆದಾಟುವರೆಗೆ ಹೋಗಿ ಹಿಂದಕ್ಕೆ ಬರುವುದಕ್ಕೆ | 25.03.2006 ಬೆಳಿಗ್ಗೆ 12:00 ಗಂಟೆಗೆ | ರೂ.5,000.00 |

**ನಿಬಂಧನೆಗಳು:**

1. ಹರಾಜಿನಲ್ಲಿ ಭಾಗವಹಿಸುವವರು ಹರಾಜು ಪ್ರಾರಂಭವಾಗುವುದಕ್ಕೆ ಮುನ್ನ 5000/- (ಐದು ಸಾವಿರ) ರೂಗಳನ್ನು ಠೇವಣಿ ಇಡಬೇಕು.

2. ಹರಾಜಿನಲ್ಲಿ ಯಶಸ್ವಿಯಾದ ಬಿಡ್ಡುದಾರರು ಆ ದಿವಸವೇ ಒಂದು ತಿಂಗಳ ಗುತ್ತಿಗೆ ಮೊತ್ತವನ್ನು ಠೇವಣಿಯಾಗಿ ಪಾವತಿ ಮಾಡಬೇಕು. ಈ ಹಣವನ್ನು ಮಾಹೆಯಾನ ಕಟ್ಟಬೇಕಾದ ಗುತ್ತಿಗೆ ಮೊತ್ತದಲ್ಲಿ (ಕೊನೆ ತಿಂಗಳಲ್ಲಿ) ಜಮಾ ಮಾಡಿಕೊಳ್ಳಲಾಗುತ್ತದೆ. ಹಾಗೂ ಬಿಡ್ಡುದಾರರು ಮಾಹೆಯಾನ ಕಟ್ಟಬೇಕಾದ ಮೊತ್ತವನ್ನು ಅದೇ ತಿಂಗಳಿನ ಕೊನೆ ದಿನದಲ್ಲಿ ಪಾವತಿಸಬೇಕು.

3. ವಾಹನ ಸಂಚಾರವನ್ನು ಸಂಗಮದಿಂದ ಮೇಕೆದಾಟುವರೆಗೆ ಮಾತ್ರ ಸೀಮಿತಗೊಳಿಸಲಾಗಿದೆ. ವಾಹನದಲ್ಲಿ ನಿರ್ದಿಷ್ಟಪಡಿಸಿದ ಸಂಖ್ಯೆಗಿಂತ ಹೆಚ್ಚಾಗಿ ಪ್ರಯಾಣಿಕರನ್ನು ಸಾಗಿಸಬಾರದು.

4. ಹರಾಜನ್ನು ದೃಢೀಕರಿಸಿ ಮಂಜೂರಾತಿ ಆದೇಶ ಪಡೆದ ನಂತರವೇ ಪ್ರಯಾಣಿಕರಿಗೆ ವಾಹನದ ಸೌಲಭ್ಯವನ್ನು ಒದಗಿಸತಕ್ಕದ್ದು.

5. ಈ ಹರಾಜಿನ ಅವಧಿಯು 2006-07ನೇ ಸಾಲಿನ ದಿನಾಂಕ: 31.03.2007ರವರೆಗೆ ಮಾತ್ರ ಜಾರಿಯಲ್ಲಿರುತ್ತದೆ.

6. ಗುತ್ತಿಗೆದಾರರು ಅರಣ್ಯದೊಳಗೆ ಅಕ್ರಮ ಚಟುವಟಿಕೆಗಳನ್ನು ಕೈಗೊಂಡಲ್ಲಿ ಅಥವಾ ಪ್ರೋತ್ಸಾಹಿಸಿದಲ್ಲಿ ಅಂತಹವರ ವಿರುದ್ಧ ಕ್ರಮವನ್ನು ತೆಗೆದುಕೊಂಡು ಗುತ್ತಿಗೆ ಅವಧಿಯನ್ನು ಅಮಾನತ್ತುಗೊಳಿಸಲಾಗುವುದು ಹಾಗೂ ಕಾನೂನು ರೀತ್ಯಾ ಕ್ರಮ ಕೈಗೊಳ್ಳಲಾಗುತ್ತದೆ.

7. ಗುತ್ತಿಗೆದಾರರು ಪ್ರಯಾಣದ ಸಮಯದಲ್ಲಿ ವನ್ಯಧಾಮದ ಒಳಗೆ ಪ್ಲಾಸ್ಟಿಕ್ ಸಾಮಗ್ರಿಗಳ ಬಳಕೆಯನ್ನು ತಡೆಗಟ್ಟಲು ನಿಗಾ ಇಡಬೇಕು. ಹಾಗೂ ಪ್ರವಾಸಿಗರ ವಿಹಾರ ಸ್ಥಳಗಳಲ್ಲಿ ಸ್ವಚ್ಛತೆ ಕೆಲಸಕ್ಕೆ ಆದ್ಯತೆ ನೀಡತಕ್ಕದ್ದು.

8. ಗುತ್ತಿಗೆದಾರರು ವಾಹನವನ್ನು ಬೆಳಿಗ್ಗೆ 6.00 ಗಂಟೆಯಿಂದ ಸಂಜೆ 6.00 ಗಂಟೆವರೆಗೆ ಮಾತ್ರ ಓಡಿಸಬಹುದಾಗಿದೆ.

9. ಪ್ರಯಾಣಕ್ಕೆ ಬಳಸುವ ವಾಹನವು ಸುಸ್ಥಿತಿಯಲ್ಲಿದ್ದು ಸಾರಿಗೆ ಅಧಿಕಾರಿಗಳಿಂದ ನೊಂದಾಯಿಸಿರಬೇಕು ಹಾಗೂ ಸಕಾಲದಲ್ಲಿ ಸರ್ಕಾರಕ್ಕೆ ಪಾವತಿ ಮಾಡಬೇಕಾದ ತೆರಿಗೆ ಹಾಗೂ ವಿಮೆ ನವೀಕರಣ ಮಾಡಿರುವ ದಾಖಲಾತಿ ಇರಬೇಕು ಹಾಗೂ ಪರಿಸರ ಮಾಲಿನ್ಯ ತಡೆಗಟ್ಟುವ ನಿಯಂತ್ರಣ ಅಧಿಕಾರಿಗಳಿಂದ ಪ್ರಮಾಣ ಪತ್ರ ಪಡೆದು ಸಲ್ಲಿಸಬೇಕು, ಅದೇ ರೀತಿ ಚಾಲಕರು ವಾಹನ ಚಾಲನೆ ಮಾಡುವ ಬಗ್ಗೆ ಅಧಿಕೃತ ಪರವಾನಿಗೆ ಹೊಂದಿರಬೇಕು. ವಾಹನ ಚಾಲನೆ ಅವಧಿಯಲ್ಲಿ ಆಕಸ್ಮಿಕವಾಗಿ ಅಪಘಾತ ಅಥವಾ ಇತರೆ ಯಾವುದೇ ಸ್ವಾಭಾವಿಕ ಮತ್ತು ಅಸ್ವಾಭಾವಿಕ ತೊಂದರೆಯಾಧಲ್ಲಿ ಇಲಾಖೆಯು ಜವಾಬ್ದಾರರಲ್ಲ. ಗುತ್ತಿಗೆದಾರರೇ ಜವಾಬ್ದಾರರಾಗಿರುತ್ತಾರೆ.

10. ವಾಹನದ ಮೂಲಕ ಸಂಗಮದಿಂದ ಮೇಕೆದಾಟುವಿಗೆ ಹೋಗಿ ಬರಲು ರೂ.20.00 ಗಳನ್ನು ಮಾತ್ರ ಸಾರ್ವಜನಿಕರಿಂದ ಪಡೆಯಬೇಕು. ಇದಕ್ಕೆ ಸಂಬಂಧಿಸಿದಂತೆ ಯಾವುದೇ ದೂರು ಬಂದಲ್ಲಿ ಗುತ್ತಿಗೆಯನ್ನು ರದ್ದು ಮಾಡಲಾಗುತ್ತದೆ. ಪ್ರಯಾಣಿಕರಿಗೆ ಮಾಹಿತಿಗಾಗಿ ನಿಗದಿಪಡಿಸಿರುವ ದರವನ್ನು ಸಂಗಮ ಹಾಗೂ ಮೇಕೆದಾಟುಗಳಲ್ಲಿ ಸೂಚನಾ ಫಲಕಗಳನ್ನು ಅಳವಡಿಸಬೇಕು. ಹಾಗೂ ಸದರಿ ಶುಲ್ಕವು ಪ್ರವಾಸಿಗರ ಸಾಗಾಣಿಕೆ ವೆಚ್ಚ ಮಾತ್ರವಾಗಿರುತ್ತದೆ.

11. ವಾಹನ ಚಾಲನೆ ಅವಧಿಯಲ್ಲಿ ವನ್ಯಪ್ರಾಣಿಗಳಿಗೆ ಯಾವುದೇ ತೊಂದರೆಯಾಗದಂತೆ ನೋಡಿಕೊಳ್ಳುವುದು.

12. ಅರ್ಕಾವತಿ ಮತ್ತು ಕಾವೇರಿ ನದಿಯಲ್ಲಿ ಮಳೆಗಾಲದಲ್ಲಿ ನದಿಗಳಲ್ಲಿ ಹೆಚ್ಚಿನ ನೀರು ಇದ್ದು ಪ್ರವಾಸಿಗರು ಬರದಿದ್ದರೂ ಹಾಗೂ ಬೇರಾವುದೇ ಘಟನೆಗಳಿಂದ ವಾಹನ ಚಾಲನೆ ಮಾಡದಿದ್ದರೂ ಸಹ ಆ ತಿಂಗಳ ಪೂರ್ತ ಗುತ್ತಿಗೆ ಹಣವನ್ನು ಗುತ್ತಿಗೆದಾರರು ಸರ್ಕಾರಕ್ಕೆ ನಿಯಮದಂತೆ ಪಾವತಿಸಬೇಕು.

13. ಹರಾಜಿನ ಎಲ್ಲಾ ಹಕ್ಕುಗಳು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ ರವರ ವ್ಯಾಪ್ತಿಗೆ ಒಳಪಟ್ಟಿರುತ್ತದೆ. ಹರಾಜನ್ನು ಒಪ್ಪುವ ಅಥವಾ ತಿರಸ್ಕರಿಸುವ ಅಧಿಕಾರ ಇವರಿಗೆ ಇರುತ್ತದೆ.

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಕಾವೇರಿ ವನ್ಯಜೀವಿ ವಿಭಾಗ, ಕನಕಪುರ.

ಪಿ.ಆರ್. 147

**IN THE COURT OF 4TH ADDITIONAL CITY CIVIL JUDGE AT MAYO HALL, BANGALORE (CCH-21)**
**P AND SC 15051/ 2005, HG.05.04.2006**

**Petitioner** **-Vs-** **Respondents**

Smt Jayamma

1. Solomon Magimai Forkodi W/o Johnson Prem Kumar.
2. J. Nobel Manohar
3. J. Angel Hemalatha, Both R2 & R3 are children of B. Johnson Prem Kumar R1 to R3 are R/o. No.6/4 EWS Quarters, Nandini Layout, Bangalore-96.

**PUBLIC NOTICE**

Notice is hereby given that a petition has been made to this Court U/s 372 of the Indian Succession Act, in favour of Petitioners in respect of securities in the name of G. Venugopal who died on 20.11.2002 at Bangalore.

The above petition stands for hearing on 05.04.2006 and any person claiming to have any interest may come and see the proceedings before grant of Succession Certificate.

Given under my hand and seal of the Court Dated: 07.03.2006.

By Order of the Court
PD-33 Assistant Registrar,
City Civil Court, Mayo Hall, Bangalore.

**IN THE COURT OF IV ADDITIONAL CITY CIVIL JUDGE AT MAYO HALL, BANGALORE (CCH-21)**
**P AND SC 15010/ 2006, HG.10.04.2006**

**Petitioner** **-Vs-** **Respondents**

1. V.R. Sastry, S/o V.B. Murthy
2. V. Bhaskar S/o V.R. Sastry
3. V. Prabhakar S/o V.R. Sastry
4. V. Uma S/o V.R. Sastry all are R/o. 2133, 8th Main, 8th Main, IInd Stage, Rajajinagar, Bangalore-10.

NIL

**PUBLIC NOTICE**

Notice is hereby given that a petition has been made to this Court U/s 372 of the Indian Succession Act, in respect of Debts and securities of V. AMRUTAVALLI, who died intestate at Bangalore, on 12.04.2002.

Be it known that no caveat has been entered and the petition is posted for hearing on 10.04.2006. All persons claiming to have any interest may come and see the proceedings, before grant of Succession Certificate.

Given under may hand and seal of the Court this the 07.03.2006.

By Order of the Court
PD-34 Assistant Registrar,
City Civil Court, Mayo Hall, Bangalore.

**FORM-IV**
**(See Rule 12)**
**NOTICE**

It is hereby Notified that the undersigned has changed her name from **SMT. PUSPAVATI NARAYANRAO BETAGERI. To SMT. SUMAN W/O GANAPATI YALGI.**

Dated: 13.09.2004
PD-62 **SMT. SUMAN G. YALGI**

**FORM-IV**
**(See Rule 12)**
**NOTICE**

It is hereby Notified that the undersigned has changed her name from **SMT. BASAWWA SHIVAPPA BOMMANASHETTI To SMT. VIJAYALAXMI W/O SHIVAPUTRAPPA TOTIGER.**

Dated: 13.09.2004
PD-63 **SMT. VIJAYALAXMI S. TOTIGER.**